ಶ್ರೀಮದ್ ಭಾಗವತಾಂತರ್ಗತ

# ಜಾಯಂತೇಯೋಪಾಖ್ಯಾನ ಸಾರಸಂಗ್ರಹ

(ವಿವರಣೆ ಸಹಿತ)



ಸಂಪಾದಕರು

ಶ್ರೀನಿವಾಸ ಸು. ಮಠದ

## ಇದೇ ಲೇಖಕರ ಪ್ರಕಟಿತ ಕೃತಿಗಳು

| | | |
|---|---|---|
| 01) | ಶ್ರೀಮಜ್ಜಯತೀರ್ಥ ಸುಪ್ರಭಾತ | 00-60 |
| 02) | ಶ್ರೀಸಪ್ತರ್ಷಿರಾಮಾಯಣ ಹಾಗೂ ಶ್ರೀರಾಮವೇದಪಾದಸ್ತೋತ್ರ (ತೃತೀಯ ಮುದ್ರಣ) | 5-00 |
| 03) | ದಾಸ ಸಾಹಿತ್ಯ ಸೌರಭ (ಸಂಪುಟ-1) | 18-00 |
| 04) | ಉಪನೀತರಿಗೆ ಉಪಯುಕ್ತ ಉಪದೇಶ (ದ್ವಿತೀಯ ಮುದ್ರಣ) | 30-00 |
| 05) | ಶ್ರೀ ಸಂಧ್ಯಾಸಾರ ಸಂಗ್ರಹ (ಪಂಚಮ ಮುದ್ರಣ) | 20-00 |
| 06) | ಶ್ರೀರುಕ್ಮಿಣೀಶವಿಜಯ ಸಾರಸಂಗ್ರಹ (ಸೈದ್ಧಾಂತಿಕ ಅಧ್ಯಯನ) | 20-00 |
| 07) | ಶ್ರೀ ದೇವಪೂಜಾ ಸಾರಸಂಗ್ರಹ (ಷಷ್ಠ ಮುದ್ರಣ) | 20-00 |
| 08) | ಸದಾಚಾರ ಸೌರಭ (ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ ಉಜಿರೆ ಅವರಿಂದ ಪ್ರಕಟಿತ) | 25-00 |
| 09) | ಶ್ರೀವಿಷ್ಣು ಸಹಸ್ರನಾಮಸ್ತೋತ್ರಮ್ (ಶ್ರೀ ಶ್ರೀ ಸತ್ಯಸಂಧತೀರ್ಥರ ಭಾಷ್ಯಾನುಸಾರಿ) (ಅಷ್ಟಮ ಮುದ್ರಣ) | 25-00 |
| 10) | ಶ್ರೀ ವೈಶ್ವದೇವಸಾರಸಂಗ್ರಹ (ತೃತೀಯ ಮುದ್ರಣ) | 20-00 |
| 11) | ದಾಸ ಸಾಹಿತ್ಯ ಸೌರಭ (ಸಂಪುಟ-2) | 20-00 |
| 12) | ಶ್ರೀಕೃಷ್ಣಾವತಾರ ಸಂದೇಶ | 25-00 |
| 13) | ಶ್ರೀ ಅಣುಭಾಷ್ಯ ಸಾರಸಂಗ್ರಹ (ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿ) (ಕನ್ನಡಾನುವಾದ) | 25-00 |
| 14) | ವೇದ ಬ್ರಹ್ಮಸೂತ್ರಗಳು ಇತ್ಯಾದಿ (ಆನಂದತೀರ್ಥ ಪ್ರತಿಷ್ಠಾನ, ಬೆಂಗಳೂರು ಪ್ರಕಟಿತ) | 50-00 |
| 15) | ಗಜೇಂದ್ರಮೋಕ್ಷ (ಒಂದು ಅಧ್ಯಯನ) | 30-00 |
| 16) | ದಶಾವತಾರ ಸ್ತೋತ್ರಮಂಜರೀ (ಎಸ್.ಎಮ್.ಎಸ್.ಓ.ಸಭಾ ಪ್ರಕಟಿತ) | 30-00 |
| 17) | ಮಧ್ವಾಷ್ಟಕಮ್ (ವಿವರಣೆ ಸಹಿತ) | 10-00 |
| 18) | ಗೀತೆಯ ಅಂತರಂಗ | 20-00 |
| 19) | ಧಾತ್ರೀಮಹಿಮೆ, ಧಾತ್ರೀಹೋಮ ಹಾಗೂ ವನಭೋಜನ ಮಹಾತ್ಮೆ (ದ್ವಿತೀಯ ಮುದ್ರಣ) | 10-00 |
| 20) | ತೀರ್ಥಪ್ರಬಂಧ: ಒಂದು ಅಧ್ಯಯನ | 20-00 |
| 21) | ಶ್ರೀನರಸಿಂಹಸ್ತೋತ್ರಮಂಜರೀ (ಚತುರ್ಥ ಮುದ್ರಣ) (ಅಪೂರ್ವ ಸ್ತೋತ್ರಸಂಗ್ರಹ) | 30-00 |
| 22) | ಪ್ರಾತಃ ಸ್ತೋತ್ರಗಳು (ಕನ್ನಡ ಭಾವಾನುವಾದ ಸಹಿತ) | 15-00 |
| 23) | ಸಮುದ್ರ ಮಥನ - ಒಂದು ಅಧ್ಯಯನ | 30-00 |
| 24) | ಶ್ರೀ ರುಕ್ಮಿಣೀಶ ವಿಜಯಃ (ಕನ್ನಡ ಕಥಾರೂಪ) | 15-00 |
| 25) | ಶ್ರೀವೇದವ್ಯಾಸ ಸ್ತೋತ್ರಮಂಜರೀ (ಹರಿದಾಸರ ಕೃತಿಗಳ ಸಹಿತ) | 20-00 |
| 26) | ಶ್ರೀನವಗ್ರಹ ಸ್ತೋತ್ರ ಮಂಜರೀ | 15-00 |
| 27) | The glory of great saint Sri Vadirajteerth | 15-00 |
| 28) | ಶ್ರೀಕೃಷ್ಣ ಸ್ತೋತ್ರ ಮಂಜರೀ (ಅಪೂರ್ವ ಸ್ತೋತ್ರ ಸಂಗ್ರಹ) | 30-00 |
| 29) | ಶ್ರೀವಾದಿರಾಜಪೂಜ್ಯಚರಣ ವಿರಚಿತ ಶ್ರೀಮದ್ ಭಾಗವತಾನುಕ್ರಮಣಿಕಾ ಕನ್ನಡಾನುವಾದ | 20-00 |
| 30) | ಕಾವ್ಯ ಶಾಸ್ತ್ರವಿನೋದ (ಎಸ್.ಎಮ್.ಎಸ್.ಓ.ಸಭಾ ಪ್ರಕಟಿತ) | 20-00 |
| 31) | ವಿವಾಹಿತರಿಗೆ ವಿಹಿತ ಉಪದೇಶ | 30-00 |
| 32) | ವೈದ್ಯಮೂರ್ತಿ ಶ್ರೀಧನ್ವಂತರಿ | 15-00 |
| 33) | ಶ್ರೀ ಋಷಿಪಂಚಮಿ ವ್ರತ, ಶ್ರೀವಿಷ್ಣು ಪಂಚಕ ವ್ರತ, ಶ್ರೀ ಭೀಷ್ಮ ಪಂಚಕ ವ್ರತ | 20-00 |
| 34) | ಶ್ರೀ ಅಧ್ಯಾತ್ಮಮಾಲಿಕಾ (ಕನ್ನಡಾನುವಾದ, ವಿವರಣೆ ಸಹಿತ) | 10-00 |
| 35) | ಸಪ್ತಾಹ ಕ್ರಮದಲ್ಲಿ ಶ್ರೀಮದ್ ಭಾಗವತ ಕಥಾಸಾರ ಸಂಗ್ರಹ (ಚತುರ್ಥ ಮುದ್ರಣ) | 50-00 |
| 36) | ಶ್ರಾದ್ಧಕರ್ಮ (ಶ್ರೀ ರಾಘವೇಂದ್ರ ದರ್ಶನಕೇಂದ್ರ, ಬೆಂಗಳೂರು ಪ್ರಕಟಿತ) (ತೃತೀಯ ಮುದ್ರಣ) | 80-00 |
| 37) | ಸೂರ್ಯಪುತ್ರ ಶನೈಶ್ಚರ | 10-00 |
| 38) | ದಾಸಸಾಹಿತ್ಯ ನಿತ್ಯಾಚರಣೆಗಳು (ವೈಜ್ಞಾನಿಕ ದೃಷ್ಟಿಯಲ್ಲಿ) | 15-00 |
| 39) | ವ್ಯಾಸ-ದಾಸ ವಾಣಿಯಲ್ಲಿ ದೈನಂದಿನ ಆಚರಣೆ | 20-00 |
| 40) | ಭಾರತೀಯ ಸಂಸ್ಕೃತಿಯಲ್ಲಿ ಗೋವು | 25-00 |

***JAYANTEYOPAKHYANA SARASANGRAHA BY***

Srinivas.S.Mathad B.SC.MA
Recipient of " Parimala Prashasti " " Jnanajyoti Award".
and Haridas Sahitya Seva Praveena.
Ajarekar Chal, Meenaxi Chowk,
BIJAPUR-586101

Mobile No : 9972078061

First Edition : 2011

Copies : 1000

Pages : 40

Price :



Publisher - : Geeta Prakashana
Ajarekar Chal, Meenaxi Chowk
BIJAPUR-?586101.,
Ph : 08352-258362

Printers :
VIJAY OFFSET PRINTERS
Ajrekar chal, meenaxi chowk
BIJAPUR - 586101.Ph : 08352-251792

# ಶ್ರೀಗೋವಿಂದರಾಜೋ ವಿಜಯತೇ

## ಆಶೀರ್ವಚನ

ಶ್ರೀಮದ್‌ಭಾಗವತವು ಪುರಾಣಗಳರಾಜ, ಇದರಲ್ಲಿ ಗಜೇಂದ್ರಮೋಕ್ಷವೇ ಮೊದಲಾದ ಅನೇಕ ಉಪಾಖ್ಯಾನಗಳು ಮೂಡಿಬಂದಿವೆ. ಈ ಉಪಾಖ್ಯಾನಗಳು– ಅನೇಕ ಮಾರ್ಮಿಕ ಸಂದೇಶಗಳನ್ನು ಸಜ್ಜನರಿಗೆ ನೀಡಿವೆ.

ಇಂಥ ಉಪಾಖ್ಯಾನಗಳಲ್ಲಿ " ಜಾಯಂತೇಯೋಪಾಖ್ಯಾನ"ವೂ ಒಂದಾಗಿದೆ. ಇದರಲ್ಲಿ ವೃಷಭನಾಮಕ ಶ್ರೀಹರಿಯ ಪುತ್ರರಾದ ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ, ಕರಭಾಜನ ಎಂಬ ಒಂಭತ್ತು ಜನ ಜ್ಞಾನಿಗಳು ನಿಮಿರಾಜನನ್ನು ಕುರಿತು ಭಗವತ್ ಪ್ರಾಪ್ತಿ ಸಾಧನಗಳಾದ ಧರ್ಮಗಳನ್ನು ತಿಳಿಸಿಕೊಟ್ಟಿದ್ದಾರೆ. ಕಾರಣ ಇಂಥ ಧರ್ಮಗಳ ಸಾರಸಂಗ್ರಹವನ್ನು ನಮ್ಮ ಪ್ರಿಯಶಿಷ್ಯ ಶ್ರೀನಿವಾಸ. ಸು. ಮಠದನು ಈ ಚಿಕ್ಕ ಹೊತ್ತಿಗೆಯಲ್ಲಿ ಮಾಡಿದ್ದಾನೆ. ಇಲ್ಲಿ ತಿಳಿಸಿದ ಧರ್ಮಗಳನ್ನು ತಿಳಿದುಕೊಂಡು ಎಲ್ಲ ಸಜ್ಜನರೂ ಆಚರಿಸುವವರಾಗಿ ಆ ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು.

ಈ ಕೃತಿಯನ್ನು ರಚನೆಮಾಡಿದ ಶ್ರೀನಿವಾಸ. ಸು. ಮಠದ ಈತನಿಗೆ ಜ್ಞಾನ, ಭಕ್ತಿ ವೈರಾಗ್ಯಾದಿಗಳನ್ನು ದಯಪಾಲಿಸಲಿ ಎಂಬುದಾಗಿ ಶ್ರೀಬಾದರಾಯಣಾಭಿನ್ನ ಶ್ರೀಗೋವಿಂದರಾಜರಲ್ಲಿ ಪ್ರಾರ್ಥಿಸುತ್ತೇವೆ.

ವಿಜಯಪುರ
6–12–10

ಪಂ॥ ತ್ರಿವಿಕ್ರಮಾಚಾರ್ಯ ಉಮರ್ಜಿ
ವಿಜಯಪುರ

# ಲೇಖಕರ ನುಡಿ

ಪ್ರಸ್ತುತ ಕೃತಿ "ಜಾಯಂತೇಯೋಪಾಖ್ಯಾನ ಸಾರಸಂಗ್ರಹ" ದಲ್ಲಿ ಆ ಭಗವಂತನ ಪ್ರೇರಣೆಯಿಂದ ಒಂಭತ್ತು ಜನ ಜ್ಞಾನಿಗಳ ಉಪದೇಶದ ಸಾರಸಂಗ್ರಹವನ್ನು ಕೊಟ್ಟಿದ್ದೇನೆ.

ಈ ಕೃತಿಯನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಕೃತಿರಚನೆಯಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾ ಗುರುಗಳಾದ ಶ್ರೀ ಪಂ|| ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ ನನ್ನ ಕೃತಜ್ಞತಾಪೂರ್ವಕ ಶಿ||ಸಾ|| ನಮಸ್ಕಾರಗಳು

ಕೃತಿಯನ್ನು ಹೊರತರುವಲ್ಲಿ ಸಹಾಯ ಮಾಡಿದ ಶ್ರೀ ಪಂ|| ಪ್ರದ್ಯುಮ್ನಾಚಾರ್ಯ ಪೂಜಾರ ಅವರಿಗೆ ನನ್ನ ನಮಸ್ಕಾರಗಳು

ಈ ಕೃತಿಯ ಮುದ್ರಣಕ್ಕೆ ಬಿಜಾಪುರದ ರಹವಾಸಿಗಳಾದ ಶ್ರೀ ಪಾಂಡುರಂಗ ಧೊಂಡೋಪಂತ ಕುಲಕರ್ಣಿ (ಬಬಲೇಶ್ವರ) ಇವರು ತಮ್ಮ ತಂದೆ –ತಾಯಿಗಳಾದ ಶ್ರೀ ಧೋಂಡೋಪಂತ ಪಾ. ಕುಲಕರ್ಣಿ ಹಾಗೂ ಸೌ|| ಭಾಗೀರಥಿಬಾಯಿ ಕುಲಕರ್ಣಿ ಇವರ ಸ್ಮರಣಾರ್ಥ ಧನಸಹಾಯ ನೀಡಿದ್ದಾರೆ. ಅವರಿಗೆ ಶ್ರೀಹರಿವಾಯು ಗುರುಗಳು ಜ್ಞಾನ ಭಕ್ತಿ ವೈರಾಗ್ಯಾದಿಗಳನ್ನು ನೀಡಲಿ.

ಹಾಗೆಯೇ ಈ ಕೃತಿಯ ಮುದ್ರಣಕ್ಕೆ ಬೆಂಗಳೂರು ನಿವಾಸಿಗಳಾದ ಶ್ರೀಯುತ ಬನಾಜಿ ಶ್ರೀನಿವಾಸಮೂರ್ತಿ ಅವರು ತಮ್ಮ ಪುತ್ರ ದಿ|| ಕೇಶವನ ಸ್ಮರಣಾರ್ಥ ಧನಸಹಾಯ ನೀಡಿದ್ದಾರೆ. ಶ್ರೀಹರಿವಾಯುಗಳು ದಿ|| ಕೇಶವನಿಗೆ ಸದ್ಗತಿ ನೀಡಲಿ.

ಕೃತಿಯ ಪ್ರಕಟಣಾ ಕಾರ್ಯದಲ್ಲಿ ನೆರವಾದ ಶ್ರೀ ರಾಘವೇಂದ್ರ ಅಡಬಡ್ಡಿ, ಚಿ|| ವಾದಿರಾಜ ಮಠದ, ಹಾಗೂ ನನ್ನ ಸುಪುತ್ರ ಚಿ|| ಆನಂದತೀರ್ಥ ಮಠದ ಇವರಿಗೆ ನನ್ನ ಆಶೀರ್ವಾದಗಳು.

ಕೃತಿಯನ್ನು ಸಕಾಲದಲ್ಲಿ ಅಂದವಾಗಿ ಮುದ್ರಣ ಮಾಡಿಕೊಟ್ಟ ಮೆ|| ವಿಜಯ ಆಫ್‌ಸೆಟ್ ಪ್ರಿಂಟರ್ಸ್ ವಿಜಾಪುರ ಇವರಿಗೆ ಧನ್ಯವಾದಗಳು.

ಈ ಕೃತಿಯಿಂದ ಶ್ರೀಹರಿವಾಯುಗುರುಗಳು ಸುಪ್ರೀತರಾಗಲಿ.

ವಿಜಾಪುರ
6–12–10

ಇತಿ ಸಜ್ಜನಸೇವಕ
ಶ್ರೀನಿವಾಸ ಸು. ಮಠದ

# ವಿಷಯಾನುಕ್ರಮಣಿಕಾ

6

# ಶ್ರೀಮದ್‌ಭಾಗವತ ಪರಿಚಯ-ಆಗತಿಕ್ರಮ

ಅಷ್ಟಾದಶ (18) ಪುರಾಣಗಳಲ್ಲಿ ಅತಿ ಪ್ರಸಿದ್ಧವಾದ ಪುರಾಣವೆಂದರೆ ಶ್ರೀಮದ್ ಭಾಗವತ ಇದು "ಪುರಾಣಗಳ ರಾಜ" ಎಂದೇ ಹೆಸರು ಪಡೆದಿದೆ. ಈ ಪುರಾಣಕ್ಕೆ ಇರುವಷ್ಟು ವ್ಯಾಖ್ಯಾನಗಳು ಬೇರೆ ಯಾವ ಪುರಾಣಕ್ಕೂ ಇಲ್ಲವೆಂಬುದು ಗಮನಾರ್ಹ ಸಂಗತಿಯಾಗಿದೆ. ಇದು ಬ್ರಹ್ಮಸೂತ್ರಗಳ ವ್ಯಾಖ್ಯಾನರೂಪವೇ ಅಗಿದೆ. ಇದರಲ್ಲಿ ಶ್ರೀಮನ್‌ಮಹಾಭಾರತದ ಅರ್ಥಗಳು ನಿರ್ಣೀತವಾಗಿವೆ.

ಒಂದು ದಿನ ಶ್ರೀವೇದವ್ಯಾಸರು ಸರಸ್ವತೀ ತೀರದ ತಮ್ಮ ಆಶ್ರಮದಲ್ಲಿ ಕುಳಿತು ಅಲಂಬುದ್ಧಿರಹಿತರಾದವರಂತೆ ವಿಚಾರಿಸುತ್ತಿದ್ದರು. "ನಾನು ವೇದಗಳ ವಿಭಾಗ ಮಾಡಿದೆ, ವೇದಗಳಿಗೆ ಅನಧಿಕಾರಿಗಳಾದ ಸ್ತ್ರೀಶೂದ್ರ, ಬ್ರಹ್ಮಬಂಧುಗಳ, ಸಜ್ಜನರ ಉದ್ಧಾರಕ್ಕಾಗಿ (ಜ್ಞಾನದ್ವಾರಾ ಮೋಕ್ಷ ಹೊಂದಲಿ ಎಂಬ ಆಶಯದಿಂದ) ಶ್ರೀಮನ್ ಮಹಾಭಾರತವನ್ನು ರಚಿಸಿದೆನು. ಆದರೂ ನನ್ನ ಭಕ್ತರಿಗೆ ಪ್ರಿಯವಾದ ಭಾಗವತ ಧರ್ಮಗಳನ್ನು ಪ್ರಾಯಃ ಸ್ಪಷ್ಟವಾಗಿ ಹೇಳಲಿಲ್ಲವೇನೋ ?"

ಈ ಹೊತ್ತಿಗೆ ಸರಿಯಾಗಿ ನಾರದ ಮಹರ್ಷಿಗಳು ಇವರ ಆಶ್ರಮಕ್ಕೆ ಬಂದರು. ಆಗ ಶ್ರೀವೇದವ್ಯಾಸರು ತಮ್ಮ ಅತೃಪ್ತಿಯ ಕಾರಣವನ್ನು ಕೇಳಿದರು. ಅದಕ್ಕೆ ನಾರದರು ಶ್ರೀವೇದವ್ಯಾಸದೇವರನ್ನು ಕುರಿತು "ಶ್ರೀ ಭಾಗವತ ಧರ್ಮಗಳನ್ನು ಸುಲಭವಾಗಿ ಸ್ಪಷ್ಟವಾಗಿ ನಿರೂಪಿಸದಿರುವುದೇ (ಭಾಗವತಧರ್ಮ ಅಪ್ರತಿಪಾದನಮೇವ ಮನೋಽಪರಿತೋಷಕಾರಣಂ) ಅತೃಪ್ತಿ ಕಾರಣ" ವೆಂಬುದಾಗಿ ಹೇಳಿ ಅಂಥ ಗ್ರಂಥವೊಂದನ್ನು ರಚಿಸಿಕೊಡಬೇಕೆಂದು ವಿಜ್ಞಾಪಿಸಿಕೊಂಡರು. ಶ್ರೀ ವೇದವ್ಯಾಸರು ಸಜ್ಜನರಿಗೆ ಮೋಕ್ಷೋಪಯೋಗಿಯಾದ ಜ್ಞಾನ ಉಂಟಾಗಲಿ ಎಂದು ಕೃಪೆಯಿಂದ ಪರಮ ಮಂಗಳಕರವಾದ ಭಾಗವತ ಧರ್ಮ ಪ್ರತಿಪಾದಕವಾದ ಶ್ರೀಮದ್‌ಭಾಗವತವನ್ನು ರಚಿಸಿ ಅದನ್ನು ಮೊದಲು ಬ್ರಹ್ಮಜ್ಞಾನಿಗಳಾದ ಶ್ರೀಶುಕಾಚಾರ್ಯರಿಗೆ ಉಪದೇಶ ಮಾಡಿದರು.

ಮೊದಲು ಶ್ರೀಮನ್ನಾರಾಯಣನು ಬ್ರಹ್ಮದೇವರಿಗೆ ಚತುಃಶ್ಲೋಕೀ ಭಾಗವತವನ್ನು ಉಪದೇಶ ಮಾಡಿದನು. ಅವರು ನಾರದರಿಗೆ ಉಪದೇಶಿಸಿದರು. ನಾರದರು ಶ್ರೀವೇದವ್ಯಾಸರಿಗೆ ಪ್ರಾರ್ಥನೆ ಮಾಡಿದ ಮೇಲೆ ಶ್ರೀವೇದವ್ಯಾಸರು ಇದನ್ನು ವಿಸ್ತರಿಸಿ ಶ್ರೀ ಶುಕಾಚಾರ್ಯರಿಗೆ ಉಪದೇಶ ಮಾಡಿದರು. ಅವರು ಪರೀಕ್ಷಿತ್ ಮಹಾರಾಜನಿಗೆ ಉಪದೇಶ ಮಾಡಿದರು. ಇದನ್ನೇ ಸೂತಾಚಾರ್ಯರು ಶೌನಕಾದಿ ಋಷಿಗಳಿಗೆ ಉಪದೇಶ ಮಾಡಿದರು.

ಶ್ರೀಮನ್ನಾರಾಯಣನು ಶೇಷದೇವರಿಗೆ ಈ ಭಾಗವತವನ್ನು ಉಪದೇಶ ಮಾಡಿದನು. ಶೇಷದೇವರು ಸನತ್ಕುಮಾರರಿಗೆ ಅವರು ಸಾಂಖ್ಯಾಯನರಿಗೆ ಅವರು ಪರಾಶರರಿಗೆ, ಪರಾಶರರು ಮೈತ್ರೇಯರಿಗೆ, ಅವರು ವಿದುರನಿಗೆ ಉಪದೇಶ ಮಾಡಿದರು.

7

ಭಗವಾನ್ ಶ್ರೀವೇದವ್ಯಾಸರಿಂದ ರಚಿತವಾದ ಶ್ರೀಮದ್‌ಭಾಗವತವು ಬ್ರಹ್ಮಸೂತ್ರಗಳ ವ್ಯಾಖ್ಯಾನರೂಪವಾಗಿದೆ. ಇದನ್ನು ತೋರಿಸುವುದಕ್ಕಾಗಿಯೇ ಎರಡನೆಯ ಸೂತ್ರ ಓಂ ಜನ್ಮಾದ್ಯಸ್ಯಯತಃ ಓಂ (1–1–2) ದಿಂದ ಭಾಗವತವು ಪ್ರಾರಂಭವಾಗುತ್ತದೆ. ಇದರಲ್ಲಿ ಶ್ರೀಮನ್‌ಮಹಾಭಾರತದ ಅರ್ಥಗಳು ನಿರ್ಣೀತವಾಗಿವೆ. ಇದು ಗಾಯತ್ರಿಯ ಭಾಷ್ಯರೂಪವು ಆಗಿದೆ. ಇದನ್ನು ತೋರಿಸಲು ಗಾಯತ್ರೀಮಂತ್ರದ "ಧೀಮಹಿ" ಎಂಬ ವೈದಿಕ ಧಾತುರೂಪದಿಂದ ಭಾಗವತದ ಮಂಗಲಪದ್ಯವು ಕೊನೆಗೊಳ್ಳುತ್ತದೆ. ಇದು ಎಲ್ಲ ಪುರಾಣಗಳ ಸಾರರೂಪವಾಗಿದೆ.ವೇದಾರ್ಥಗಳಿಂದ ಕೂಡಿರುವುದೂ ಅಗಿದೆ. ಇದರಲ್ಲಿ 12 ಸ್ಕಂಧಗಳಿವೆ. ಶ್ರೀವಿಜಯಧ್ವಜೀಯ ಪಾಠದಂತೆ 343 ಅಧ್ಯಾಯಗಳಿವೆ. 18,000 ಶ್ಲೋಕಗಳಿವೆ.

ಸಾವು ಎಂಬ ಹಾವು ಬಾಯಿತೆರೆದು ನಿಂತಿದೆ. ಜಗತ್ತಿನಲ್ಲಿರುವ ಎಲ್ಲ ಜೀವರು ಅಸಹಾಯಕರಾಗಿ ಅದರ ಬಾಯೊಳಗೆ ಸಾಗುತ್ತಿದ್ದಾರೆ. ಈ ಹಾವಿನಿಂದ ಪಾರಾಗುವ ಉಪಾಯವೆಂದರೆ ಶುಕಮಹಾಮುನಿಗಳು ನುಡಿದ "ಶ್ರೀಮದ್‌ಭಾಗವತ" ವೆಂಬ ದಿವ್ಯವಾದ ಔಷಧ ಸೇವನೆಯೇ ಆಗಿದೆಯೆಂದು ಹೇಳಬೇಕು.

ಯಾರು ನಿತ್ಯದಲ್ಲಿಯೂ ಶ್ರೀಮದ್‌ಭಾಗವತ ಶ್ಲೋಕ, ಅರ್ಧಶ್ಲೋಕ, ಆದರ ಪಾದಶ್ಲೋಕವನ್ನಾಗಲೀ ಕೇಳುವರೋ, ಪಠಿಸುವರೋ ಅವರು ಸಾವಿರ ಗೋದಾನದ ಫಲವನ್ನು ಹೊಂದುತ್ತಾರೆ ನಿಶ್ಚಿತ.

*****

# ಶ್ರೀಮದ್‌ಭಾಗವತದ ಹಿರಿಮೆ

ಶ್ರೀಮದ್‌ಭಾಗವತದ ಕಥೆಯು ವೇದ ಉಪನಿಷತ್ತುಗಳ ಸಾರದಿಂದಲೇ ರಚಿತವಾಗಿದೆ. ವೇದೋಪನಿಷತ್ತುಗಳಿಂದ ಬೇರೆಯಾಗಿ ಅವುಗಳ ಫಲಸ್ವರೂಪವಿರುವ ಕಾರಣ ಭಾಗವತವು ಅತ್ಯುತ್ತಮವೆಂದು ತಿಳಿದುಬರುತ್ತದೆ.[1]

ಶ್ರೀಮದ್‌ಭಾಗವತ ಪುರಾಣವು ವೇದಗಳಿಗೆ ಸಮಾನವಾಗಿದೆ. ಶ್ರೀವೇದವ್ಯಾಸರು ಇದನ್ನು ಭಕ್ತಿ, ಜ್ಞಾನ, ವೈರಾಗ್ಯದ ಸ್ಥಾಪನೆಗಾಗಿಯೇ ಪ್ರಕಾಶಿತಗೊಳಿಸಿದ್ದಾರೆ.[2]

ಶ್ರೀಮದ್‌ಭಾಗವತ ಕಥೆಯನ್ನು ಸರ್ವದಾ ಸೇವಿಸಬೇಕು. ಆಸ್ವಾದಿಸಬೇಕು. ಇದರ ಶ್ರವಣಮಾತ್ರದಿಂದ ಶ್ರೀಹರಿಯು ಹೃದಯದಲ್ಲಿ ಬಂದು ನೆಲೆಸುವನು.[3]

ಪ್ರತಿದಿನವೂ ಶ್ರೀಮದ್‌ಭಾಗವತದ ಕಥೆ ನಡೆಯುವ ಮನೆಯು ತೀರ್ಥಸ್ವರೂಪವೇ ಆಗಿದೆ. ಆ ಮನೆಯಲ್ಲಿ ವಾಸಿಸುವವರ ಎಲ್ಲ ಪಾಪಗಳು ನಾಶವಾಗುತ್ತವೆ.[4]

---

1) ವೇದೋಪನಿಷದಾಂ ಸಾರಾಜ್ಜಾತಾ ಭಾಗವತೀಕಥಾ ।
ಅತ್ಯುತ್ತಮಾ ತತೋಭಾತಿ ಪೃಥಗ್ಭೂತಾ ಫಲಾಕೃತಿಃ ॥

ಶ್ರೀಮದ್ಭಾಗವತ ಮಹಾತ್ಮೆ (2–67)

2) ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಭಕ್ತಿ ಜ್ಞಾನ ವಿರಾಗಾಣಾಂ ಸ್ಥಾಪನಾಯ ಪ್ರಕಾಶಿತಮ್ ॥

ಶ್ರೀಮದ್ಭಾಗವತ ಮಹಾತ್ಮೆ (2–71)

3) ಸದಾ ಸೇವ್ಯಾ ಸದಾ ಸೇವ್ಯಾ ಶ್ರೀಮದ್ ಭಾಗವತೀಕಥಾ ।
ಯಸ್ಯಾಃ ಶ್ರವಣಮಾತ್ರೇಣ ಹರಿಶ್ಚಿತ್ತಂ ಸಮಾಶ್ರಯೇತ್ ॥

ಶ್ರೀಮದ್ಭಾಗವತ ಮಹಾತ್ಮೆ (3–25)

4) ಕಥಾ ಭಾಗವತಸ್ಯಾಪಿ ನಿತ್ಯಂ ಭವತಿ ಯದ್ಗೃಹೇ ।
ತದ್‌ಗೃಹಂ ತೀರ್ಥರೂಪಂ ಹಿ ವಸತಾಂ ಪಾಪನಾಶನಮ್ ॥

ಶ್ರೀಮದ್ಭಾಗವತ ಮಹಾತ್ಮೆ (3–29)

ಸಾವಿರಾರು ಅಶ್ವಮೇಧಗಳು, ನೂರಾರು ವಾಜಪೇಯ ಯಜ್ಞಗಳು ಈ ಶುಕಶಾಸ್ತ್ರವಾದ ಭಾಗವತದ ಕಥೆಯ ಹದಿನಾರನೆಯ ಒಂದಂಶವೂ ಆಗಲಾರವು.[5]

ತಪೋಧನರೇ! ಜನರು ಚೆನ್ನಾಗಿ ಶ್ರೀಮದ್‌ಭಾಗವತ ಕಥೆಯನ್ನು ಶ್ರವಣ ಮಾಡುವವರೆಗೆ ಮಾತ್ರ ಅವರ ಶರೀರದಲ್ಲಿ ಪಾಪಗಳು ವಾಸಿಸುತ್ತವೆ.[6]

ಫಲದ ದೃಷ್ಟಿಯಿಂದ ಈ ಶುಕಶಾಸ್ತ್ರ ಕಥೆಗೆ ಗಂಗೆ, ಯಮುನೆ, ಕಾಶೀ, ಪುಷ್ಕರ, ಪ್ರಯಾಗ, ಮುಂತಾದ ತೀರ್ಥಕ್ಷೇತ್ರಗಳು ಸಾಟಿಯಾಗಲಾರವು ಅರ್ಥಾತ್ ಇವೆಲ್ಲಕ್ಕಿಂತ ಭಾಗವತ ಕಥೆ ಶ್ರೇಷ್ಠವಾಗಿದೆ.[7]

ನಿಮಗೆ ಪರಮಗತಿ (ಮೋಕ್ಷದ)ಯ ಇಚ್ಛೆ ಇದ್ದರೆ, ಸ್ವಮುಖದಿಂದ ಶ್ರೀಮದ್ ಭಾಗವತದ ಅರ್ಧ ಅಥವಾ ಕಾಲು ಶ್ಲೋಕವನ್ನಾದರೂ ಪ್ರತಿದಿನ ಪಠಿಸಬೇಕು.[8]

ಈ ಪ್ರಪಂಚದಲ್ಲಿ ಶ್ರೀಮದ್ಭಾಗವತ ಕಥೆ ದೊರೆಯುವದು ದುರ್ಲಭವೇಸರಿ. ಕೋಟಿ ಜನ್ಮಗಳ ಪುಣ್ಯವು ಇದ್ದಾಗ ಮಾತ್ರ ಅದು ಪ್ರಾಪ್ತಿಯಾಗುತ್ತದೆ.[9]

---

5) ಅಶ್ವಮೇಧ ಸಹಸ್ರಾಣಿ ವಾಜಪೇಯ ಶತಾನಿ ಚ ।
ಶುಕಶಾಸ್ತ್ರ ಕಥಾಯಾಶ್ಚ ಕಲಾಂ ನಾರ್ಹಂತಿ ಷೋಡಶೀಮ್॥
ಶ್ರೀಮದ್ಭಾಗವತ ಮಹಾತ್ಮೆ (3–30)

6) ತಾವತ್ಪಾಪಾನಿ ದೇಹೇऽಸ್ಮಿನ್ ನಿವಸಂತಿ ತಪೋಧನಾಃ ।
ಯಾವನ್ನಶ್ರೂಯತೇ ಸಮ್ಯಕ್ ಶ್ರೀಮದ್ಭಾಗವತಂ ನರೈಃ ॥ " (3–31)

7) ನ ಗಂಗಾ ನ ಗಯಾಕಾಶೀ ಪುಷ್ಕರಮ್ ನ ಪ್ರಯಾಗಕಮ್ ।
ಶುಕಶಾಸ್ತ್ರ ಕಥಾಯಾಶ್ಚ ಫಲೇನ ಸಮತಾಂ ನಯೇತ್ ॥ " (3–32)

8) ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।
ಪಠಸ್ವ ಸ್ವಮುಖೇನೈವ ಯದೀಚ್ಛಸಿ ಪರಾಂ ಗತಿಮ್ ॥ " (3–33)

9) ದುರ್ಲಭೈವ ಕಥಾ ಲೋಕೇ ಶ್ರೀಮದ್ಭಾಗವತೋದ್ಭವಾ ।
ಕೋಟಿ ಜನ್ಮ ಸಮುತ್ಥೇನ ಪುಣ್ಯೇನೈವ ತು ಲಭ್ಯತೇ ॥ " (3–44)

ಶ್ರೀಮದ್‌ಭಾಗವತವು ಪುರಾಣಗಳಿಗೆ ಶಿರೋಮಣಿಯಾಗಿದೆ. ವೈಷ್ಣವರಿಗೆ ಪರಮಧನ ಎನಿಸಿದೆ. ಇದರಲ್ಲಿ ಪರಮಹಂಸರಿಗೆ ಪ್ರಾಪ್ಯವಾಗಿರುವ ವಿಶುದ್ಧವಾದ ಜ್ಞಾನವು ವರ್ಣಿತವಾಗಿದೆ. ಜ್ಞಾನ, ವೈರಾಗ್ಯ ಭಕ್ತಿಗಳಿಂದ ಕೂಡಿದ ನಿವೃತ್ತಿಮಾರ್ಗವನ್ನು ಇಲ್ಲಿ ಪ್ರಕಾಶಪಡಿಸಲಾಗಿದೆ. ಇದರ ಶ್ರವಣ ಪಾರಾಯಣ, ಮನನಗಳಲ್ಲಿ ಆಸಕ್ತನಾದವನು ಮುಕ್ತನಾಗುತ್ತಾನೆ.[10]

---

10) ಶ್ರೀಮದ್ಭಾಗವತಂ ಪುರಾಣತಿಲಕಂ ಯದ್ವೈಷ್ಣವಾನಾಂ ಧನಂ
ಯುಸ್ಮಿನ್ಪಾರಮಹಂಸ್ಯಮೇವಮಮಲಂ ಜ್ಞಾನಂ ಪರಂ ಗೀಯತೇ ।
ಯತ್ರ ಜ್ಞಾನ ವಿರಾಗ ಭಕ್ತಿ ಸಹಿತಂ ನೈಷ್ಕರ್ಮ್ಯಮಾವಿಷ್ಕೃತಂ
ತತ್ ಶೃಣ್ವನ್ ಪ್ರಪಠನ್ ವಿಚಾರಣಪರೋ ಭಕ್ತ್ಯಾ ವಿಮುಚ್ಯೇನ್ನರಃ॥ (6–82)

*****

# ಜಾಯಂತೇಯೋಪಾಖ್ಯಾನ

ಒಂದು ಸಲ ನಾರದರು ಶ್ರೀಕೃಷ್ಣನ ಪಾದಸೇವೆಯಲ್ಲಿ ಉತ್ಸುಕರಾಗಿ ಶ್ರೀ ಕೃಷ್ಣನ ಬಾಹುಗಳಿಂದ ರಕ್ಷಿತವಾದ ದ್ವಾರಕೆಯಲ್ಲಿ ವಾಸವಾಗಿದ್ದರು. ನಾರದರೊಮ್ಮೆ ವಸುದೇವನ ಮನೆಗೆ ಬಂದಾಗ ವಸುದೇವನು ಅವರನ್ನು ಚೆನ್ನಾಗಿ ಪೂಜಿಸಿ ಸತ್ಕರಿಸಿ, ಅವರನ್ನು ಕುರಿತು "ನಾರದರೇ ! ಭಗವಂತನ ಬಂಧಕ ಶಕ್ತಿ ವಿಚಿತ್ರವಾಗಿದೆ. ಸಂಸಾರದಲ್ಲಿ ಅಜ್ಞಾನ, ಭಯ, ನಾಶಗಳೇ ಎದ್ದು ಕಾಣುತ್ತಿವೆ. ಈ ಸಂಸಾರವನ್ನು ದಾಟುವ ಮಾರ್ಗ ಯಾವದು ? ಭಗವಂತ ಪ್ರಸನ್ನನಾಗಲು ಜೀವರು ಆಚರಿಸಬೇಕಾದ ಭಾಗವತ ಧರ್ಮಗಳು ಯಾವವು ? ದಯವಿಟ್ಟು ನನಗೆ ಉಪದೇಶಿಸಿರಿ" ಎಂದನು.

ಆಗ ನಾರದರು ಹೇಳುತ್ತಾರೆ–ಋಷಭನಾಮಕ ಪರಮಾತ್ಮನ ಮಕ್ಕಳಾದ ಕವಿ, ಹರಿ ಮೊದಲಾದ ಒಂಭತ್ತು ಜನ ಜ್ಞಾನಿಗಳು ವಿರಕ್ತರೂ ವೇದಾಂತಿಗಳು ಆಗಿದ್ದರು. ಅವರು ನಿಮಿರಾಜನ ಸತ್ರಯಾಗದಲ್ಲಿ ಇದ್ದರು. ಆ ಜ್ಞಾನಿಗಳನ್ನು ರಾಜನು ಉಪದೇಶ ಮಾಡಬೇಕೆಂದು ಕೇಳಿಕೊಳ್ಳಲು ಅವರು ನಿಮಿರಾಜನಿಗೆ ಉಪದೇಶ ಮಾಡಿದರು. ಅದನ್ನೇ ನಾನು ನಿನಗೆ ಹೇಳುವೆ.

ಮೊದಲು ಜಾಯಂತೇಯ ವಂಶದ ವರ್ಣನೆಯನ್ನು ಮಾಡುತ್ತಾ–ಸ್ವಾಯಂಭುವ ಮನುವಿಗೆ ಪ್ರಿಯವ್ರತನೆಂಬ ಮಗನಿದ್ದನು. ಅವನಿಗೆ ಆಗ್ನೀಧ್ರನು, ಆಗ್ನೀಧ್ರನಿಗೆ ನಾಭಿರಾಜನು, ನಾಭಿರಾಜನಿಗೆ ಋಷಭನೆಂಬುವನು ಮಗನು. ಈ ಋಷಭನಾಮಕನು ಮೋಕ್ಷಸಾಧನವಾದ ಧರ್ಮೋಪದೇಶಕ್ಕಾಗಿ ಅವತರಿಸಿದ ವಾಸುದೇವನ ಸ್ವರೂಪಾಂಶವೆಂದು ಹೇಳುತ್ತಾರೆ. ಋಷಭನಾಮಕನಿಗೆ ಬ್ರಹ್ಮಜ್ಞಾನಿಗಳಾದ ನೂರುಜನ ಮಕ್ಕಳು ಇದ್ದರು.

ನೂರು ಜನರಲ್ಲಿ ಭರತಚಕ್ರವರ್ತಿಯು ಜ್ಯೇಷ್ಠನು ಇವನು ಭಗವಂತನಲ್ಲಿಯೇ ಆಸಕ್ತನಾಗಿದ್ದನು. ಇವನಿಂದ ಭೂಮಿಯು ಭರತಖಂಡವೆಂದು ಪ್ರಸಿದ್ಧಿಗೆ ಬಂದಿತು ಭರತ ಚಕ್ರವರ್ತಿಯು ರಾಜ್ಯವನ್ನಾಳಿ ಕೊನೆಗೆ ವನಕ್ಕೆ ತೆರಳಿ ತಪಸ್ಸಿನಿಂದ ಭಗವಂತನನ್ನು ಆರಾಧಿಸಿ ಮೂರು ಜನ್ಮಗಳನ್ನು ಹೊಂದಿ ಭಗವಂತನ ಲೋಕವನ್ನು ಸೇರಿದನು.

ಭರತನ ತಮ್ಮಂದಿರಾದ 99 ಜನರಲ್ಲಿ ಒಂಭತ್ತು ಜನರು ಒಂಭತ್ತು ದ್ವೀಪಗಳಿಗೆ ಅಧಿಪತಿಗಳಾದರು. ಉಳಿದವರಲ್ಲಿ 81 ಜನ ಬ್ರಾಹ್ಮಣರಾಗಿ ಕರ್ಮಕಾಂಡಕ್ಕೆ ಪ್ರವರ್ತಕರಾದರು. ಉಳಿದ ಒಂಭತ್ತು ಜನರು ಪರಮಭಾಗ್ಯಶಾಲಿಗಳೂ, ಊರ್ಧ್ವರೇತಸ್ಕರೂ, ಭಿಕ್ಷುಗಳೂ, ವೇದಶಾಸ್ತ್ರಪಾರಂಗತರೂ, ಸಂನ್ಯಾಸಿಗಳೂ ಆದರು.

ಇವರು ಹೆಸರು ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ, ಕರಭಾಜನ, ಎಂಬುದಾಗಿ ಇತ್ತು.[1] ಅವರ ಹೆಸರುಗಳು ಅವರ ಗುಣಗಳನ್ನು ತಿಳಿಸುತ್ತಿದ್ದವು.

ಕವಿಃ ಜ್ಞಾನಿಯು, ಹರಿಃ ಅಜ್ಞಾನಕಳೆಯುವವನು, ಅಂತರಿಕ್ಷಃ ಅಂತರ್ಜ್ಞಾನಿಯು, ಪ್ರಬುದ್ಧಃ ಉತ್ತಮ ಜ್ಞಾನಉಳ್ಳವನು, ಪಿಪ್ಪಲಾಯನಃ ಪುಣ್ಯಕರ್ಮಫಲವಾದ ಜ್ಞಾನಾಶ್ರಯನು, ಆವಿರ್ಹೋತ್ರಃ ಪ್ರಕಟಿಸಲ್ಪಟ್ಟ ಕರ್ಮಮಾರ್ಗಉಳ್ಳವನು. ದ್ರುಮಿಲಃ ಶೀಘ್ರವಾಗಿವೇದಾರ್ಥವನ್ನು ಏಕೀಕರಿಸತಕ್ಕವನು, ಚಮಸಃ ವೇದಾರ್ಥವನ್ನು ಪಾನ ಮಾಡುವವರಲ್ಲಿ ಶ್ರೇಷ್ಠನು, ಕರಭಾಜನಃ ಕೈಯಲ್ಲಿರುವ ನೆಲ್ಲಿಕಾಯಿಯಂತೆ ತಿಳಿಯಲ್ಪಟ್ಟ ವೇದಾರ್ಥಉಳ್ಳವನು.

ಒಂದು ಸಲ ಋಷಭನಾಮಕ ಭಗವಂತನ ಪುತ್ರರಾದ ಕವಿಮೊದಲಾದ ಒಂಭತ್ತುಜನ ನಿಮಿಚಕ್ರವರ್ತಿಯ ಸತ್ರಯಾಗಕ್ಕೆ ಆಗಮಿಸಿದರು. ನಿಮಿರಾಜನು ಅವರನ್ನು ಸತ್ಕರಿಸಿ ಪೂಜಿಸಿದನು. ಈ ಒಂಭತ್ತು ಜನರನ್ನು ಕುರಿತು ನಿಮಿರಾಜನು ಪ್ರಶ್ನೆ ಮಾಡುತ್ತಾನೆ.

ಅನೇಕ ದೇಹಸಂಬಂಧವುಳ್ಳ ಜೀವರಿಗೆ ಮನುಷ್ಯದೇಹವು ಸುಲಭವಾಗಿ ಸಿಗುವದಿಲ್ಲ. ನಿತ್ಯವಲ್ಲದ ಈ ದೇಹ ಬಂದಾಗ ಭಗವಂತನಿಗೆ ಪ್ರಿಯರಾದ ತಮ್ಮಂತಹ ಜ್ಞಾನಿಗಳ ದರ್ಶನವು ಕಷ್ಟಸಾಧ್ಯವು[2]

---

1) ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ ।
ಆವಿರ್ಹೋತ್ರೋಽಥ ದ್ರುಮಿಲಃ ಚಮಸಃ ಕರಭಾಜನಃ ॥ (11–2–21)

2) ದುರ್ಲಭೋ ಮಾನುಷೋ ದೇಹಃ ದೇಹಿನಾಂ ಕ್ಷಣಭಂಗುರಃ ।
ತತ್ರಾಪಿ ದುರ್ಲಭಂ ಮನ್ಯೇ ವೈಕುಂಠಪ್ರಿಯದರ್ಶನಮ್ ॥ (11–2–29)

ದುರ್ಲಭವಾದ ತಮ್ಮ ದರ್ಶನವಾದ್ದರಿಂದ ಪಾಪರಹಿತವಾದ ತಮ್ಮಿಂದ ಮೋಕ್ಷ ಸಾಧನವನ್ನು ಕುರಿತು ಪ್ರಶ್ನಿಸುತ್ತೇನೆ. ಈ ಸಂಸಾರದಲ್ಲಿ ಸಜ್ಜನರ ಸಮಾಗಮವು ಜನರಿಗೆ ಸುಖನಿಧಿಯು.[3]

ಯಾವ ಧರ್ಮಗಳನ್ನು ಅನುಷ್ಠಾನ ಮಾಡುವದರಿಂದ ಭಗವಂತನು ಶರಣಾಗತನಾದ ಅಧಿಕಾರಿಗೆ ತನ್ನನ್ನೇ ಕೊಡುವನೋ ಅಂಥ ಭಗವತ್ ಪ್ರಾಪ್ತಿಸಾಧನಗಳಾದ ಧರ್ಮಗಳನ್ನು ನನಗೆ ಹೇಳಿರಿ.[4]

**ನಿಮಿರಾಜನ ಪ್ರಶ್ನೆಗೆ ಕವಿ ಎಂಬ ಜ್ಞಾನಿಗಳು ಉತ್ತರ ಕೊಡುತ್ತಾರೆ.**

ಸಂಸಾರದಲ್ಲಿ ಅಮಂಗಲವಾದ ದೇಹ, ಮನೆ ಮುಂತಾದವುಗಳಲ್ಲಿ ನಾನು ನನ್ನದೆಂಬ ಅಭಿಮಾನದಿಂದ ಭಯಗ್ರಸ್ತವಾದ ಮನಸ್ಸುಳ್ಳ ಅಧಿಕಾರಿಗೆ, ಯಾವನ ಉಪಾಸನೆಯಿಂದ ಭಯವು ಸಂಪೂರ್ಣವಾಗಿ ನಾಶವಾಗುವದೋ ಅಂತಹ ಯಾವಾಗಲೂ ಹೇಯೋಪಾದೇಯರಹಿತನಾದ ಭಗವಂತನ ಚರಣಕಮಲಗಳ ಧ್ಯಾನವೇ ಸರ್ವಭಯಪರಿಹಾರಕವೆಂದು ಭಾವಿಸುತ್ತೇನೆ.[5]

ಶ್ರೀಹರಿಯ ಪಾದೋಪಾಸನೆಯೇ ಮುಖ್ಯಧರ್ಮವೆಂದು ಮನಸ್ಸಿನಲ್ಲಿಟ್ಟುಕೊಂಡು ಅದರ ಅಂಗವಾಗಿ ಹೇಳತಕ್ಕ ಉಪಾಯಗಳೂ ಸಹ ಭಾಗವತಧರ್ಮಗಳೆಂದು ಹೇಳುತ್ತಾರೆ.

---

3) ಅತ ಆತ್ಯಂತಿಕಂ ಕ್ಷೇಮಂ ಪೃಚ್ಛಾಮೋ ಭವತೋಽನಘಾಃ ।
ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಮ್॥(11–2–30)

4) ಧರ್ಮಾನ್ ಭಾಗವತಾನ್ ಬ್ರೂತ ಯದಿ ನಃ ಶ್ರುತಯೇ ಕ್ಷಮಮ್।
ಯೈಃ ಪ್ರಸನ್ನಃ ಪ್ರಪನ್ನಾಯ ಯಾಸ್ಯತ್ಯಾತ್ಮಾನಮಪ್ಯಜಃ ॥ (11–2–31)

**ಕವಿರುವಾಚ:–**

5) ಮನ್ಯೇ ಕುತಶ್ಚಿದ್ ಭಯಮಚ್ಯುತಸ್ಯ
ಪಾದಾಂಬುಜೋಪಾಸನಮತ್ರ ನಿತ್ಯಮ್ ।
ಉದ್ವಿಗ್ನಬುದ್ಧೇರಸದಾತ್ಮಭಾವಾದ್ವಿ
ಶ್ವಾತ್ಮನಾ ಯತ್ರ ನಿವರ್ತತೇ ಭೀಃ ॥ (11–2–33)

ಅಜ್ಞರಾದ ಜನರಿಗೆ ಚೆನ್ನಾಗಿ ಭಗವದ್ಜ್ಞಾನಕ್ಕೆ ಯಾವ ಉಪಾಯಗಳು ಭಗವಂತನಿಂದ ಪಂಚರಾತ್ರಾದಿಗಳಲ್ಲಿ ಹೇಳಲ್ಪಟ್ಟಿವೆಯೋ, ಅವು ಭಗವದ್ಜ್ಞಾನ ಸಾಧನ ಧರ್ಮಗಳೆಂದು ತಿಳಿಯಬೇಕು.[6]

ತನ್ನಯೋಗ್ಯತೆಯನ್ನು ಅನುಸರಿಸಿ ದೇಹದಿಂದ , ವಾಕ್ಯದಿಂದ , ಸಂಕಲ್ಪರೂಪ ಮನೋವೃತ್ತಿಯಿಂದ, ಇಂದ್ರಿಯಗಳಿಂದ, ನಿಶ್ಚಯವಾದ ಜ್ಞಾನದಿಂದ, ನಾನು ಹರಿಯನ್ನು ಪೂಜಿಸುವೆನು ಎಂಬ ಅಹಂಕಾರವಿಲ್ಲದೇ ಏನೇನು ಮಾಡುತ್ತಾನೋ ಆ ಎಲ್ಲ ಕ್ರಿಯೆಗಳಲ್ಲಿ ಸ್ವಾತಂತ್ರ್ಯವಿಲ್ಲವೆಂದು ತಿಳಿದು ಸರ್ವೋತ್ತಮನಾದ ನಾರಾಯಣನಿಗೆ ಸಮರ್ಪಿಸಬೇಕು. ಇಂಥ ಸಮರ್ಪಣೆಯು ಭಗವಂತನ ಪ್ರೀತಿಜನಕವಾಗಿ ಅವನ ಜ್ಞಾನಕ್ಕೆ ಕಾರಣವಾಗುತ್ತದೆ.[7]

ಬುದ್ಧಿಯಿಂದ ವಿಷಯವನ್ನು ಧ್ಯಾನಿಸುವ ಪುರುಷನಿಗೆ ತನ್ನ ಅಧೀನದಲ್ಲಿ ಇಲ್ಲದಿರುವುದಾದರೂ. ಶರೀರ ಮನೆ ಮುಂತಾದವು ಸ್ವಪ್ನ, ಮನೋರಥಗಳಂತೆ ತನ್ನವೆಂದೇ ತೋರುತ್ತವೆ. ಆದರೆ ಆ ದೇಹಾದಿಗಳೇ ವಿಷಯವಾಗಿವುಳ್ಳ, ಇದನ್ನು ಮಾಡುವೆನೆಂಬ ಸಂಕಲ್ಪವು, ಇದನ್ನು ಬಿಡುವುದರಲ್ಲಿ ನಾನು ಸಮರ್ಥನೆಂಬ ವಿಕಲ್ಪವು ಇವುಗಳಿಂದ ಕೂಡಿದ ಮನಸ್ಸನ್ನು ಜ್ಞಾನಿಯಾದವನು ಭಗವಂತನಲ್ಲಿ ಭಕ್ತಿಯಿಂದ ಅರ್ಪಿಸಬೇಕು. ಈ ಸಮರ್ಪಣೆಯಿಂದ ಸಂಸಾರಭಯದಿಂದ ಮುಕ್ತಿಯಾಗುತ್ತದೆ.[8]

ಇಲ್ಲಿ ದ್ವಯ ಶಬ್ದಕ್ಕೆ ತನ್ನ ಶರೀರ, ಮನೆ ಮೊದಲಾದವೆಂದು ಅರ್ಥವು. ಇವು ನಿಜವಾಗಿ ಜೀವನ ಅಧೀನವಲ್ಲ. ಆದರೂ ಭ್ರಾಂತಿಯಿಂದ ತನ್ನ ಅಧೀನ ವಿದ್ದಂತೆ ತೋರುತ್ತವೆ ಎಂಬುದಾಗಿ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

---

6) ಯೇ ವೈ ಭಗವತಾ ಪ್ರೋಕ್ತಾ ಉಪಾಯಾಹ್ಯಾತ್ಮಲಬ್ಧಯೇ।
ಅಂಜಃ ಪುಂಸಾಮವಿದುಷಾಂ ವಿದ್ಧಿ ಭಾಗವತಾನ್ ಹಿ ತಾನ್॥ (11–2–34)

7) ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುಧ್ಯಾತ್ಮನಾ ವಾನುಸೃತಸ್ವಭಾವಮ್ ।
ಕರೋತಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯೇತ್ತತ್ ॥ (11–2–36)

8) ಅವಿದ್ಯಮಾನೋಽಪ್ಯವಭಾತಿ ಹಿ ದ್ವಯೋ
ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ ।
ತತ್ ಕರ್ಮ ಸಂಕಲ್ಪವಿಕಲ್ಪಕಂ ಮನೋ
ಬುಧೋ ನಿದಧ್ಯಾದಭಯಂ ತತಃ ಸ್ಯಾತ್ ॥ (11–2–38)

ಚಕ್ರಧಾರಿಯಾದ ಆ ಭಗವಂತನ ಮಂಗಳದಾಯಕವಾದ ಅವತಾರಗಳು ಕ್ರಿಯೆಗಳು, ಜಗತ್ತಿನಲ್ಲಿ ಗಾನಮಾಡಲ್ಪಡುತ್ತವೆ. ಅವುಗಳನ್ನು ಕೇಳುತ್ತ, ಜನ್ಮಕರ್ಮವಿಷಯಗಳಾದ ಹೆಸರುಗಳನ್ನು ಹಾಡುತ್ತ ನಾಚಿಕೆಯಿಲ್ಲದೇ ಇತರ ವಿಷಯಾಸಕ್ತಿ ಇಲ್ಲದವನಾಗಿ ಜಗತ್ತಿನಲ್ಲಿ ಸಂಚರಿಸಬೇಕು.[9]

ಆಕಾಶ, ವಾಯು, ಅಗ್ನಿ, ನೀರು, ಭೂಮಿ, ನಕ್ಷತ್ರಗಳು, ಪ್ರಾಣಿಗಳು, ದಿಕ್ಕುಗಳು, ಮೊದಲಾದವುಗಳನ್ನು, ನದಿ, ಸಮುದ್ರಗಳನ್ನು, ಉತ್ಪನ್ನವಾದ ಜಗತ್ತಿನಲ್ಲಿರುವ ಎಲ್ಲ ಪದಾರ್ಥಗಳನ್ನು, ಶ್ರೀಹರಿಯ ಆವಾಸಸ್ಥಾನವೆಂದು, ಈಶ್ವರ ಭಿನ್ನವಾದ ಅಧಿಪತಿ ರಹಿತವೆಂದು ತಿಳಿದು ನಮಸ್ಕರಿಸಬೇಕು.[10]

"ಈಶಾವಾಸ್ಯಮಿದಂ ಸರ್ವಂ" ಎಂಬುದಾಗಿ ಈಶಾವಾಸ್ಯೋಪನಿಷತ್ತಿನಲ್ಲಿ ತಿಳಿಸಿರುವದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಆಕಾಶಾದಿಗಳಲ್ಲಿರುವ ಭಗವಂತನನ್ನು ಉಪಾಸನೆ ಮಾಡಿದವನಿಗೆ, ಭಗವಂತನಲ್ಲಿ ಭಕ್ತಿಯು, ತನ್ನಲ್ಲಿ ಅಸ್ವತಂತ್ರಜ್ಞಾನವು, ಸಂಸಾರದಲ್ಲಿ ವೈರಾಗ್ಯವು, ಈ ಮೂರು ಒಂದೇಕಾಲದಲ್ಲಿ ಆಗುತ್ತವೆ. ಹೇಗೆ ಹಸಿದ ವ್ಯಕ್ತಿಗೆ ಊಟಮಾಡುವಾಗ ಒಂದೊಂದು ತುತ್ತಿಗೂ ಹಸಿವೆಯ ನಿವಾರಣೆ, ಹೊಟ್ಟೆ ತುಂಬುವುದು, ಅಲಂ (ಸಾಕು) ಬುದ್ಧಿಯು ಬರುವುದೋ ಹಾಗೆ ಭಕ್ತಿ, ವೈರಾಗ್ಯ, ಅಸ್ವಾತಂತ್ರ್ಯಜ್ಞಾನಾದಿಗಳು ಭಗವಂತನ ಉಪಾಸನೆಯಿಂದ ಏಕಕಾಲದಲ್ಲಿ ಆಗುತ್ತವೆ.[11]

---

9) ಶೃಣ್ವನ್ ಸುಭದ್ರಾಣಿ ರಥಾಂಗಪಾಣೇ
ರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ ।
ಗೀತಾನಿ ನಾಮಾನಿ ತದರ್ಥಕಾನಿ
ಗಾಯನ್ ವಿಲಜ್ಜೋ ವಿಚರೇದಸಂಗಃ ॥ (11–2–39)

10) ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ
ಜ್ಯೋತೀಂಷಿ ಸತ್ವಾನಿ ದಿಶೋ ದ್ರುಮಾದೀನ್ ।
ಸರಿತ್ಸಮುದ್ರಾಂಶ್ಚ ಹರೇಃ ಶರೀರಂ
ಯತ್ಕಿಂಚ ಭೂತಂ ಪ್ರಣಮೇದನನ್ಯಮ್ ॥ (11–2–41)

11) ಭಕ್ತಿಃ ಪರೇ ಸ್ವೇಽನುಭವೋ ವಿರಕ್ತಿ
ರನ್ಯತ್ರ ಚೈಷ ತ್ರಿಕ ಏಕಕಾಲಃ ।
ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯು
ಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋಽನುಘಾಸಮ್ ॥ (11–2–42)

ಈ ರೀತಿಯಾಗಿ ಶ್ರೀಹರಿಯ ಪಾದಗಳನ್ನು ಸೇವನೆಮಾಡಿದ ನಂತರದಲ್ಲಿ, ಭಗವದ್ ಭಕ್ತನಿಗೆ ಭಗವಂತನ ಅಪರೋಕ್ಷಜ್ಞಾನವು, ವೈರಾಗ್ಯವು, ವಿಶೇಷವಾದ ಭಕ್ತಿಯು ಉಂಟಾಗುತ್ತದೆ. ಅನಂತರ ಉತ್ತಮವಾದ ಸ್ವಯೋಗ್ಯಮುಕ್ತಿಯನ್ನು ಕೊಡುವ ಆ ಭಗವಂತನ್ನು ಹೊಂದುತ್ತಾನೆ.[12]

ನಿಮಿರಾಜನು ಯೋಗೀಶ್ವರರೇ ! ಈಗ ನೀವು ದಯಮಾಡಿ ಭಗವದ್ಭಕ್ತನ ಲಕ್ಷಣಗಳನ್ನು ತಿಳಿಸಿರಿ. ಅವನ ಧರ್ಮ ಯಾವುದು? ಅವನು ಹೇಗಿರುವನು? ಅವನು ಹೇಗೆ ನಡೆದುಕೊಳ್ಳುವನು? ಯಾವ ಚಿಹ್ನೆಗಳಿಂದ ಕೂಡಿರುತ್ತಾನೆ? ಯಾವನು ಭಗವಂತನಿಗೆ ಪ್ರಿಯನಾಗಿರುತ್ತಾನೆ?

**ಉತ್ತಮ ಭಾಗವತರ ಲಕ್ಷಣಗಳನ್ನು "ಹರಿ" ಎಂಬ ಜ್ಞಾನಿಗಳು ಹೇಳುತ್ತಾರೆ.**

ಎಲ್ಲ ಪದಾರ್ಥಗಳಲ್ಲಿ ಇರುವ ಪರಿಪೂರ್ಣನಾದ ಶ್ರೀಹರಿಯ ಪೂರ್ಣತ್ವವನ್ನು, ಎಲ್ಲ ಪ್ರಾಣಿಗಳು ಭಗವಂತನನ್ನು ಆಶ್ರಯಿಸಿರುವವೆಂದು ಯಾರು ತಿಳಿಯುವರೋ, ಅವರು ಉತ್ತಮರಾದ ಭಾಗವತರು.[13]

ಇಲ್ಲಿ ಶ್ರೀಭಗವದ್ಗೀತೆಯ ಶ್ಲೋಕದ ಭಾವವನ್ನು ಕಾಣಬಹುದು.

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ (6–29)

ಭಗವಂತನಲ್ಲಿ ಭಕ್ತಿಯನ್ನು, ಶ್ರೀಹರಿಯ ಅಧೀನರಾದ ಸಜ್ಜನರಲ್ಲಿ ಸ್ನೇಹವನ್ನು, ಅಜ್ಞರಲ್ಲಿ ದಯೆಯನ್ನು, ದ್ವೇಷಿಗಳಲ್ಲಿ ಉದಾಸೀನತೆಯನ್ನು ಯಾವನು ಮಾಡುವನೋ, ಮತ್ತು ಸಮಸ್ತ ಪ್ರಪಂಚವು ಭಗವಂತನ ಅಧೀನವೆಂದು ತಿಳಿಯುವದಿಲ್ಲವೋ ಅವನು ಮಧ್ಯಮನು.[14]

---

12) ಇತ್ಯಚ್ಯುತಾಂಘ್ರಿಂ ಭಜತೋಽನು (ಪ್ರೀತ್ಯಾ) ವೃತ್ತ್ಯಾ
ಭಕ್ತಿರ್ವಿರಕ್ತಿರ್ಭಗವತ್ಪ್ರಬೋಧಃ ।
ಭವಂತಿ ವೈ ಭಾಗವತಸ್ಯ ರಾಜನ್
ತತಃ ಪರಾಂ ಶಾಂತಿಮುಪೈತಿ ಸಾಕ್ಷಾತ್ ॥ (11–2–43)

**ಹರಿರುವಾಚ–**

13) ಸರ್ವಭೂತೇಷು ಯಃ ಪಶ್ಯೇದ್ ಭಗವದ್ಭಾವಮಾತ್ಮನಃ ।
ಭೂತಾನಿ ಭಗವತ್ಯಾತ್ಮನ್ ಏಷ ಭಾಗವತೋತ್ತಮಃ ॥ (11–2–45)

14) ಈಶ್ವರೇ ತದಧೀನೇಷು ಬಾಲಿಷೇಷು ದ್ವಿಷತ್ಸು ಚ ।
ಪ್ರೇಮ ಮೈತ್ರೀಕೃಪೋಪೇಕ್ಷಾ ಯಃ ಕರೋತಿ ಸ ಮಧ್ಯಮಃ ॥ (11–2–46)

ಯಾವನು ಪ್ರತಿಮೆಗಳಲ್ಲಿಯೇ ವಿಷ್ಣುವಿಗೆ ಪೂಜೆಯನ್ನು ಭಕ್ತಿಯಿಂದ ಇಚ್ಛಿಸುತ್ತಾನೋ, ಭಗವದ್ಭಕ್ತರಲ್ಲಿ ಪೂಜೆಯನ್ನು ಇಚ್ಛಿಸುವದಿಲ್ಲವೋ, ಅಷ್ಟೇಅಲ್ಲ ಭಕ್ತರಲ್ಲಿ ತಾರತಮ್ಯವನ್ನು ತಿಳಿಯುವದಿಲ್ಲವೋ, ಉಪೇಕ್ಷಕರು, ದ್ವೇಷಿಗಳು ಇವರಲ್ಲಿ ದ್ವೇಷ ಪ್ರಕಾರವನ್ನು ತಿಳಿಯುವದಿಲ್ಲವೊ, ವಿಷ್ಣುವು ಸಾಮಾನ್ಯತಃ ಉತ್ತಮನೆಂದು ತಿಳಿಯುವನೋ, ಪ್ರಕೃತಿ ನಿಮಿತ್ತ ಸ್ವರ್ಗವನ್ನು ಹೊಂದಿ, ಇನ್ನೂ ಕೆಳಗೆ ಹೋಗುವವನೋ ಅವನು ಅಧಮ ಭಾಗವತನು.[15]

ಪ್ರಪಂಚದ ವ್ಯಾಪಾರವನ್ನು ಭಗವಂತನ ಇಚ್ಛಾಧೀನವೆಂದು ತಿಳಿದವನಾಗಿ ಯಾವನು ಇಂದ್ರಿಯಗಳಿಂದ ಶಬ್ದಾದಿ ವಿಷಯಗಳನ್ನು ಅನುಭವಿಸಿದರೂ ಅತಿಯಾಗಿ ದ್ವೇಷಿಸುವದೂಇಲ್ಲ, ಅತಿಯಾಗಿ ಪ್ರೀತಿಸುವುದೂ ಇಲ್ಲ ಅವನೇ ಭಾಗವತೋತ್ತಮನು.[16]

ಇಲ್ಲಿ ಯೋ ನ ಹೃಷ್ಯತಿ ನ ದ್ವೇಷ್ಟಿ.....ಗೀತಾ(12–17) ಶ್ಲೋಕವನ್ನು ಸ್ಮರಿಸಬಹುದು.

ಭಗವಂತನು ಬ್ರಹ್ಮಾದಿದೇವತೆಗಳಿಗಿಂತ ಉತ್ಕೃಷ್ಟನು ಮತ್ತು ಎಲ್ಲರಿಗೂ ಪ್ರೇರಕನು ಎಂಬ ಭಾವನೆಯುಳ್ಳವನಾಗಿ, ದೇಹ, ಇಂದ್ರಿಯಗಳು, ಪಂಚಪ್ರಾಣಗಳು, ಮನಸ್ಸು, ಬುದ್ಧಿ ಇವುಗಳಿಂದಾಗುವ ಜನ್ಮ, ನಾಶಗಳು ಮತ್ತು ಅದರಿಂದಾಗುವ ಹಸಿವೆ, ನೀರಡಿಕೆ, ಮುಂತಾದ ಕಷ್ಟಗಳಿಂದ ಈ ವಿಧವಾದ ಸಂಸಾರಧರ್ಮಗಳಿಂದ ಇವೆಲ್ಲವೂ ನನಗೆ ಮಾತ್ರ ಆಗುತ್ತವೆಂಬ ಮೋಹರಹಿತನಾಗಿ ದೇಹಾದ್ಯಭಿಮಾನಿಗಳಾದ ಅಸುರರಿಗೂ ಸಹ ಆಗುತ್ತವೆಂದು ತಿಳಿಯುವವನು ಭಾಗವತೋತ್ತಮನು.[17]

---

15) ಅರ್ಚಾಯಾಮೇವ ಹರಯೇ ಪೂಜಾಂ ಯಃ ಶ್ರದ್ಧಯೇಹತೇ ।
ನ ತದ್ಭಕ್ತೇಷು ಚಾನ್ಯೇಷು ಸ ಭಕ್ತಃ ಪ್ರಾಕೃತಃ ಸ್ಮೃತಃ ॥

(11–2–47)

16) ಗೃಹೀತ್ವಾಪೀಂದ್ರಿಯೈರರ್ಥಾನ್ ಯೋ ನ ದ್ವೇಷ್ಟಿ ನ ಹೃಷ್ಯತಿ ।
ವಿಷ್ಣೋರ್ಮಾಯಾಮಿಮಾಂ ಪಶ್ಯನ್ ಸ ವೈ ಭಾಗವತೋತ್ತಮಃ ॥

(11–2–48)

17) ದೇಹೇಂದ್ರಿಯ ಪ್ರಾಣಮನೋಧಿಯಾಂ ಯೋ
ಜನ್ಮಾಪ್ಯಯಕ್ಷುದ್ಭಯತರ್ಷಕೃಚ್ಛ್ರೈಃ ।
ಸಂಸಾರಧರ್ಮೈರವಿಮುಹ್ಯಮಾನಃ
ಸ್ಮೃತ್ಯಾ ಹರೇರ್ಭಾಗವತಪ್ರಧಾನಃ ॥

(11–2–49)

ಯಾವನು ವಾಸುದೇವನೇ ಮುಖ್ಯ ಆಶ್ರಯನೆಂದು ತಿಳಿದವನಾಗಿ, ಕಾಮ ಮತ್ತು ಕರ್ಮ ಇವುಗಳ ಕಾರಣಗಳಾದ ಅವಿದ್ಯಾ, ಪ್ರಕೃತಿ ಮೊದಲಾದವುಗಳನ್ನು ಮತ್ತು ಈ ಕಾಮಾದಿಗಳ ಉತ್ಪತ್ತಿಯನ್ನು ತಿಳಿಯುವನೋ ಅಂದರೆ ಇವೆಲ್ಲಕ್ಕೂ ವಾಸುದೇವನ ಪ್ರೇರಣೆಯೇ ಮುಖ್ಯ ಕಾರಣವೆಂದು ತಿಳಿಯುವನೋ ಅವನೇ ಉತ್ತಮಭಾಗವತನು.[18]

ಬ್ರಾಹ್ಮಣ ಮೊದಲಾದ ಜನ್ಮವು, ಗುರುಕುಲವಾಸ ಮೊದಲಾದ ಕರ್ಮವು, ಜನ್ಮದಿಂದುಂಟಾಗುವ ವರ್ಣಗಳು, ಕರ್ಮದಿಂದುಂಟಾಗುವ ಆಶ್ರಮಗಳು ಮತ್ತು ಬ್ರಾಹ್ಮಣತ್ವ ಮೊದಲಾದ ಜಾತಿಗಳು, ಇವುಗಳಿಂದ ಸಂಕೇತವನ್ನು ಹೊಂದಿದ, ಕಾಮಕರ್ಮಬೀಜಗಳಿಂದ ಉತ್ಪನ್ನವಾದ ಈ ದೇಹದಲ್ಲಿ ಯಾವನಿಗೆ ತಾನು ದೇಹದಿಂದ ಭಿನ್ನನೆಂಬ ಸುಸ್ಪಷ್ಟವಾದ ವಿವೇಕಬುದ್ಧಿಯು ಇರುವುದೋ ಅವನೇ ಶ್ರೀವಿಷ್ಣುವಿಗೆ ಪ್ರಿಯನಾದ ಭಾಗವತೋತ್ತಮನು.[19]

ಯಾರಿಗೆ ತಾನು, ಭಗವಂತನು ಪ್ರಾಕೃತ ಮನಸ್ಸಿರುವ ಸಂಸಾರದಲ್ಲಿ ಮತ್ತು ಸ್ವರೂಪ ಆವಿರ್ಭಾವವುಳ್ಳ ಮೋಕ್ಷದಲ್ಲಿ ಸಹ ಅಭೇದ ಎಂಬ ಜ್ಞಾನವು ಇರುವುದಿಲ್ಲವೋ ಮತ್ತು ಯಾರು ಬ್ರಹ್ಮಾದಿದೇವತೆಗಳಿಗಿರುವ ತಾರತಮ್ಯವನ್ನು ತಿಳಿದುಕೊಂಡು ಅವರಲ್ಲಿ ತಾರತಮ್ಯಕ್ಕೆ ಅನುಸಾರವಾದ ವೃತ್ತಿಯುಳ್ಳವರೋ, ಯಾರು ಶ್ರೀವಿಷ್ಣುವೇ ಸರ್ವೋತ್ತಮನೆಂದು ತಿಳಿದಿರುವರೋ ಅವರೇ ಭಾಗವತೋತ್ತಮರು.[20]

ನಿರಂತರವಾದ ಭಗವಂತನ ಸ್ಮರಣೆಯುಳ್ಳ, ಮೂರು ಲೋಕದ ವೈಭವಕ್ಕೆ ಕಾರಣರಾದ ಬ್ರಹ್ಮರುದ್ರಾದಿದೇವತೆಗಳೇ ಮೊದಲಾದವರಿಂದ, ನಿತ್ಯದಲ್ಲಿಯೂ ವಿಚಾರಿಸಲ್ಪಡುತ್ತಿರುವ ಭಗವಂತನ ಪಾದಕಮಲವನ್ನು ಬಿಟ್ಟು ಲವ, ನಿಮಿಷದ

---

18) ಯಃ ಕಾಮಕರ್ಮಬೀಜಾನಿ ಪಶ್ಯತ್ಯೇಷಾಂಚ ಸಂಭವಮ್ ।
ವಾಸುದೇವೈಕನಿಲಯಃ ಸ ವೈ ಭಾಗವತೋತ್ತಮಃ ॥ (11–2–50)

19) ನ ಯಸ್ಯ ಜನ್ಮಕರ್ಮಭ್ಯಾಂ ನ ವರ್ಣಾಶ್ರಮ ಜಾತಿಭಿಃ ।
ಸಂಜ್ಜಿತೇಽಸ್ಮಿನ್ನಹಂಭಾವೋ ದೇಹೇ ವೈ ಸ ಹರೇಃ ಪ್ರಿಯಃ ॥ (11–2–51)

20) ನ ಯಸ್ಯ ಸ್ವಃ ಪರ ಇತಿ ಚಿತ್ತೇ ಸ್ವಾತ್ಮನಿ ವಾಽಭಿದಾ।
ಸರ್ವಭೂತಸಮಃ ಶಾಂತಃ ಸ ವೈ ಭಾಗವತೋತ್ತಮಃ (11–2–52)

ಅರ್ಧದಷ್ಟು ಸಹ ಅನ್ಯವಿಚಾರ ಮಾಡುವುದಿಲ್ಲವೋ ಅವನು ವಿಷ್ಣುಭಕ್ತರಲ್ಲಿ ಶ್ರೇಷ್ಠನೆಂದು ತಿಳಿಯಲ್ಪಡುತ್ತಾನೆ.[21]

ಎಡವುವುದು, ಆಕಳಿಸುವದು ಮುಂತಾದ ನಿಮಿತ್ತಗಳಿಂದ ಭಗವಂತನಿಂದ ಪ್ರೇರಿತರಾಗಿ, ನಾಮವನ್ನು ಉಚ್ಚರಿಸಿದರೂ ಸಹ, ಪಾಪರಾಶಿಗಳನ್ನು ನಾಶಗೊಳಿಸುವ ಶ್ರೀಹರಿಯು ಪ್ರತ್ಯಕ್ಷನಾಗಿ ಭಕ್ತಿಪಾಶದಿಂದ ಸ್ಥಿರವಾಗಿ ಕಟ್ಟಲ್ಪಟ್ಟ ಪಾದಕಮಲವುಳ್ಳವನಾಗಿ, ಯಾವ ಅಧಿಕಾರಿಯ ಮನಸ್ಸನ್ನು ಬಿಟ್ಟು ಹೋಗುವುದಿಲ್ಲವೋ ಅವನೇ ಭಾಗವತರಲ್ಲಿ ಶ್ರೇಷ್ಠನೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದ್ದಾನೆ.[22]

**ಅಂತರಿಕ್ಷ ಎಂಬ ಜ್ಞಾನಿಗಳು ಉಪದೇಶಿಸುತ್ತಾರೆ**

ರಾಜನೇ! ಆ ಭಗವಂತನು ಮೊದಲು ಸರ್ವಜೀವನಿಯಾಮಕನಾಗಿದ್ದು, ಸ್ವತಂತ್ರನಾಗಿ ಪಂಚಮಹಾಭೂತಗಳಿಂದ ಉಚ್ಚ ನೀಚವಾದ ಶರೀರಗಳನ್ನು ಯೋಗ್ಯರಿಗೆ ತತ್ವಜ್ಞಾನಕ್ಕೋಸ್ಕರವಾಗಿ (ಮೂರು ವಿಧಜೀವರನ್ನು) ಸೃಷ್ಟಿಮಾಡಿದನು.[23]

ಆ ಭಗವಂತನು ಈ ರೀತಿ ಪಂಚಮಹಾಭೂತಗಳಿಂದ ಶರೀರಗಳನ್ನು ಸೃಷ್ಟಿ ಮಾಡಿ ಜೀವನಿಂದ ಕೂಡಿಕೊಂಡು ದೇಹದಲ್ಲಿ ಪ್ರವೇಶಿಸಿ ತನ್ನನ್ನು ಮನೋನಿಯಾಮಕವಾದ ಒಂದು ರೂಪದಿಂದ ಇಂದ್ರಿಯಗಳಿಗೆ ನಿಯಾಮಕವಾದ

---

21) ತ್ರಿಭುವನ ವಿಭವಹೇತುಭಿರ್ವಿಕುಂಠ
ಸ್ಮೃತಿಭಿರಜೇಶ ಸುರಾದಿಭಿರ್ವಿಮೃಗ್ಯಾತ್ ।
ನ ಚಲತಿ ಭಗವತ್ಪದಾರವಿಂದಾಲ್ಲವ
ನಿಮಿಷಾರ್ಧಮಪಿ ಸ್ಮ ವೈಷ್ಣವಾಗ್ರ್ಯಃ ॥ (11–2–53)

22) ವಿಸೃಜತಿ ಹೃದಯಂ ನ ಯಸ್ಯ ಸಾಕ್ಷಾ
ದ್ಧರಿರವಶಾಭಿಹಿತೋಽಪ್ಯಘೌಘನಾಶಃ ।
ಪ್ರಣಯರಶನಯಾ ಧೃತಾಂಘ್ರಿಪದ್ಮಃ
ಸ ಭವತಿ ಭಾಗವತ ಪ್ರಧಾನ ಉಕ್ತಃ ॥ (11–2–55)

23) **ಅಂತರಿಕ್ಷ ಉವಾಚ–**
ಏಭಿರ್ಭೂತಾನಿ ಭೂತಾತ್ಮಾ ಮಹಾಭೂತೈರ್ಮಹಾಭುಜ ।
ಸಸರ್ಜೋಚ್ಚಾವಚಾನ್ಯಾದೌ ಸ್ವಯಮಾತ್ಮಪ್ರಸಿದ್ಧಯೇ ॥ (11–3–3)

ಹತ್ತು ರೂಪಗಳಿಂದ, ವಿಭಾಗ ಮಾಡುವವನಾಗಿ ವಿಷಯಸಾರಭೂತವಾದ ಆನಂದವನ್ನು ಭೋಗಿಸುತ್ತಾನೆ.[24]

ಅಶುಭವಾದುದನ್ನು ಬಿಟ್ಟು ಶುಭವನ್ನು ಮಾತ್ರ ಸ್ವೀಕರಿಸಲು ಸಮರ್ಥನಾದ ಭಗವಂತನು ತನ್ನಿಂದ ವಿಷಯಾಭಿಮುಖವಾಗಿ ಪ್ರೇರಿತವಾದ, ತನ್ನ ಅಧೀನವಾದ ಇಂದ್ರಿಯಗಳಿಂದ, ಶುಭವಾದ ಸಾರಭೂತವಾದ ಆನಂದವನ್ನು ಮಾತ್ರ ಭೋಗಿಸುವನು. ಹೀಗಿರಲು ಸರ್ವೋತ್ತಮವಾದ ಪರಮಾತ್ಮ ವಸ್ತುವನ್ನು ದೇಹಯೋಗದಿಂದ ಉತ್ಪನ್ನವಾದ ಜೀವಾಖ್ಯ ವಸ್ತುವೆಂದು ಭ್ರಾಂತಿಯಿಂದ ತಿಳಿಯುವ ಜೀವನು ಈ ಸಂಸಾರದಲ್ಲಿ ಬದ್ಧನಾಗುತ್ತಾನೆ.[25]

ಜೀವನು ಕರ್ಮೇಂದ್ರಿಯಗಳಿಂದ, ಪೂರ್ವಕರ್ಮ, ಪ್ರಯತ್ನ, ಸಂಸ್ಕಾರ ಮೊದಲಾದ ನಿಮಿತ್ತಗಳಿಂದ ಕೂಡಿದ ಕರ್ಮಗಳನ್ನು ಮಾಡುವವನಾಗಿ ಆ ಆ ಕರ್ಮಫಲವನ್ನು ಅನುಭವಿಸುತ್ತ ಈ ಸಂಸಾರದಲ್ಲಿ ದುಃಖಕ್ಕಾಗಿ ಸಂಚರಿಸುತ್ತಾನೆ.[26]

ಈಗ ಪ್ರಳಯದ ವರ್ಣನೆಯನ್ನು ಮಾಡುತ್ತಾರೆ- ಭೂಮಿಯಲ್ಲಿ ನೂರು ವರ್ಷಗಳವರೆಗೆ ತೀವ್ರವಾದ ಅನಾವೃಷ್ಟಿಯು ಆಗುತ್ತದೆ. ಅಂದರೆ ಸರ್ವಾತ್ಮನಾ ಮಳೆಯೇ ಆಗುವುದಿಲ್ಲ. ಪ್ರಳಯಕಾಲದಿಂದ ಅಭಿವೃದ್ಧವಾದ ಉಷ್ಣತೆಯುಳ್ಳ ಸೂರ್ಯನು ಮೂರುಲೋಕಗಳಿಗೆ ಅತಿಶಯವಾದ ತಾಪವನ್ನು ಹೊಂದಿಸುವನು.[27]

---

24) ಏವಂ ಸೃಷ್ಟ್ವಾ ಸ ಭೂತಾನಿ ಸ್ಥವಿಷ್ಠೈಃ ಪಂಚಧಾತುಭಿಃ ।
ಏಕಧಾ ದಶಧಾऽऽತ್ಮಾನಂ ವಿಭಜನ್ ಜುಷತೇ ಗುಣಾನ್ ॥ (11–3–4)

25) ಗುಣೈರ್ಗುಣಾನ್ ಸ ಭುಂಜಾನ ಆತ್ಮ ಪ್ರದ್ಯೋತಿತೈಃ ಪ್ರಭುಃ।
ಮನ್ಯಮಾನ ಇದಂ ಸೃಷ್ಟಮಾತ್ಮಾನಮಿಹ ಸಜ್ಜತೇ ॥ (11–3–5)

26) ಕರ್ಮಾಣಿ ಕರ್ಮಭಿಃ ಕುರ್ವನ್ ಸನಿಮಿತ್ತಾನಿ ದೇಹಭೃತ್ ।
ತತ್ತತ್ಕರ್ಮಫಲಂ ಗೃಹ್ಣನ್ ಭ್ರಮತೀಹ ಸುಖೇತರಮ್ ॥ (11–3–6)

27) ಶತವರ್ಷಮನಾವೃಷ್ಟಿರ್ಭವಿಷ್ಯತ್ಯುಲ್ಬಣಾ ಭುವಿ ।
ತತ್ಕಾಲೋಪಚಿತೋಷ್ಣಾರ್ಕೋ ಲೋಕಾಂಸ್ತ್ರೀನ್ ಪ್ರತಪಿಷ್ಯತಿ ॥ (11–3–9)

ಪಾತಾಲದಿಂದ ಆರಂಭಮಾಡಿ ಸಂಕರ್ಷಣನಾಮಕ ಭಗವಂತನ ಮುಖದಿಂದ ಹೊರಟ ಅಗ್ನಿಯು ಸುಡುತ್ತ ಗಾಳಿಯಿಂದ ಪ್ರೇರಿತವಾಗಿ ಎತ್ತರವಾದ ಜ್ವಾಲೆಗಳಿಂದ ಕೂಡಿಕೊಂಡು ಸುತ್ತಲೂ ಪ್ರಜ್ವಲಿಸುತ್ತದೆ.[28]

ಪ್ರಳಯಕಾಲೀನ ಮೇಘಗಳ ಸಮುದಾಯವು ಆನೆಯ ಸೊಂಡಿಲಿನಷ್ಟು ದಪ್ಪವಾದ ನೀರಿನ ಧಾರೆಗಳಿಂದ ನಿರಂತರ ನೂರು ವರ್ಷಗಳವರೆಗೆ ಮಳೆಯನ್ನು ಸುರಿಸುತ್ತದೆ. ಇದು ಶಾಸ್ತ್ರಪ್ರಸಿದ್ಧವು. ಆ ಕಾರಣದಿಂದ ಬ್ರಹ್ಮಾಂಡವು ನೀರಲ್ಲಿ ಮುಳುಗಿಹೋಗುತ್ತದೆ.[29]

ಅನಂತರ ಬ್ರಹ್ಮಾಂಡವು ನೀರಲ್ಲಿ ಮುಳುಗಿರುವುದರಿಂದ ಬ್ರಹ್ಮಾಂಡದಲ್ಲಿದ್ದ ಬ್ರಹ್ಮದೇವರು ಬ್ರಹ್ಮಾಂಡವನ್ನು ಬಿಟ್ಟು, ಕಟ್ಟಿಗೆಯು ಪೂರ್ತಿಸುಟ್ಟ ನಂತರ ಬೆಂಕಿಯು ಆಶ್ರಯರಹಿತವಾಗಿ ಮೂಲಕಾರಣವಾದ ವಹ್ನಿಯನ್ನು ಆಶ್ರಯಿಸುವಂತೆ, ಪರಮಸೂಕ್ಷ್ಮನಾದ, ಅಗೋಚರನಾದ ಭಗವಂತನನ್ನು ಪ್ರವೇಶಿಸುತ್ತಾರೆ.[30]

**ನಿಮಿರಾಜನು ಭಗವಂತನ ಬಂಧಕ ಶಕ್ತಿಯನ್ನು ಜಯಿಸುವ ಉಪಾಯವನ್ನು ಕೇಳಲು ಪ್ರಬುದ್ಧ ಎಂಬ ಜ್ಞಾನಿಗಳು ಉಪದೇಶಿಸುತ್ತಾರೆ.**

ದುಃಖವನ್ನು ಕಳೆದುಕೊಂಡು ಸುಖವನ್ನು ಹೊಂದಲು ಕರ್ಮಗಳನ್ನು ಆಚರಿಸುವ ವಿಷಯಸುಖ ಲೋಲುಪರಾದ ಜನರಿಗೆ ಆಗುವ ಫಲದಲ್ಲಿ ವೈಪರೀತ್ಯವನ್ನು ಅಂದರೆ ಸುಖವಾಗದೇ ದುಃಖವೇ ವರ್ಧಿಸುವದನ್ನು ವಿವೇಕಪೂರ್ವಕವಾಗಿ ತಿಳಿಯಬೇಕು.[31]

---

28) ಪಾತಾಲತಲಮಾರಭ್ಯ ಸಂಕರ್ಷಣಮುಖಾನಲಃ ।
ದಹನ್ನೂರ್ಧ್ವಶಿಖೋ ವಿಷ್ವಕ್ ವರ್ಧತೇ ವಾಯುನೇರಿತಃ ॥ (11–3–10)

29) ಸಾಂವರ್ತಕೋ ಮೇಘಗಣೋ ವರ್ಷತಿಸ್ಮ ಶತಂ ಸಮಾಃ ।
ಧಾರಾಭಿರ್ಹಸ್ತಿಹಸ್ತಾಭಿರ್ಲೀಯತೇ ಸಲಿಲೇ ವಿರಾಟ್ ॥ (11–3–11)

30) ತತೋ ವಿರಾಜಮುತ್ಸೃಜ್ಯ ವೈರಾಜಃ ಪುರುಷೋ ನೃಪ ।
ಅವ್ಯಕ್ತಂ ವಿಶತೇ ಸೂಕ್ಷ್ಮಂ ನಿರಿಂಧನ ಇವಾನಲಃ ॥ (11–3–12)

31) **ಪ್ರಬುದ್ಧಉವಾಚ**
ಕರ್ಮಾಣ್ಯಾರಭಮಾಣಾನಾಂ ದುಃಖಹತ್ಯೈ ಸುಖಾಯ ಚ ।
ಪಶ್ಯೇತ್ಪಾಕವಿಪರ್ಯಾಸಂ ಮಿಥುನೀಚಾರಿಣಾಂ ನೃಣಾಂ ॥ (11–3–19)

ಸರ್ವದಾ ದುಃಖಕ್ಕೆ ಕಾರಣವಾದ, ಸಂಪಾದಿಸಲು ಕಷ್ಟವಾದ ತನ್ನ ಮರಣಕ್ಕೂ ಕಾರಣವಾಗುವ ಸಂಪತ್ತಿನಿಂದ ಮತ್ತು ಅಶಾಶ್ವತವಾದ ಮನೆ, ಮಕ್ಕಳು, ಬಂಧುಗಳು, ಪಶುಗಳು ಇವುಗಳನ್ನು ದುಃಖದಿಂದ ಸಂಪಾದಿಸಿದರೂ ಸಹ ಮನಸ್ಸಿಗೆ ಪ್ರೀತಿಯು ಹೇಗೆ ಉಂಟಾದೀತು ? ಮತ್ತಷ್ಟು ದುಃಖಕ್ಕೆ ಕಾರಣವಾಗುತ್ತದೆ.[32]

ಇದೇ ರೀತಿ ಕಾಮ್ಯಕರ್ಮಗಳಿಂದ ಲಭಿಸುವ ಪಾರತ್ರಿಕವಾದ ಸ್ವರ್ಗಲೋಕವು ಸಹ, ಮನುಷ್ಯರಿಗಿಂತ ಉತ್ತಮರಾದ ದೇವತೆಗಳಿಂದ ಅದು ತಿರಸ್ಕರಿಸಲ್ಪಡುವುದರಿಂದ, ಯುದ್ಧರಂಗದಲ್ಲಿ ಹೆಚ್ಚಿನ ಶೂರರಿಂದ ನಾಶಹೊಂದುವಂತೆ ಸ್ವರ್ಗವು ಸಹ ಅನಿತ್ಯವೆಂದು ತಿಳಿಯಬೇಕು.[33]

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ॥ (9–21)

ಈ ಗೀತಾ ವಾಕ್ಯವನ್ನು ಇಲ್ಲಿ ಸ್ಮರಿಸಬೇಕು.

ವಿಜ್ಞಾನವೇ ಮೋಕ್ಷಸಾಧನವಾದ್ದರಿಂದ, ಜ್ಞಾನವನ್ನು ಸಂಪಾದಿಸಲು, ಉತ್ಕೃಷ್ಟವಾದ ಪುರುಷಾರ್ಥಪ್ರಧಾನನಾದ, ಸರ್ವೋತ್ತಮನಾದ ಭಗವಂತನನ್ನು ತಿಳಿಯಲು ಇಚ್ಛಿಸುವ ಅಧಿಕಾರಿಯು ಸದಾಗಮಗಳಲ್ಲಿ ತಿಳಿಸಿದ ಪ್ರಮೇಯಗಳಲ್ಲಿ ಪಂಡಿತನಾದ, ಭಗವಂತನಲ್ಲಿ ಶ್ರೇಷ್ಠ ಭಕ್ತಿಸಂಪನ್ನನಾದ ಆಚಾರ್ಯ (ಗುರು)ರನ್ನು ಆಶ್ರಯಿಸಬೇಕು.[34]

ಆ ಗುರುಗಳಲ್ಲಿ ತನ್ನ ದೇವತೆಯಾದ ಭಗವಂತನು ಸನ್ನಿಹಿತನಾಗಿರುವನೆಂಬ ಅನುಸಂಧಾನದಿಂದ ಭಗವತ್‌ಪ್ರೀತಿಕರವಾದ ಧರ್ಮಗಳನ್ನು ಅವರಿಂದ ಕಲಿತುಕೊಳ್ಳಬೇಕು. ತನ್ನ ಸ್ಥಾನವಾದ ಮುಕ್ತಿಯನ್ನು ಕೊಡುವ ಸ್ವಾಮಿಯಾದ ಶ್ರೀ ಹರಿಯು ನಿಷ್ಕಪಟವಾದ ಸೇವೆಯಿಂದಲೇ ಪ್ರಸನ್ನನಾಗುತ್ತಾನೆ.[35]

---

32) ನಿತ್ಯಾರ್ತಿದೇನ ವಿತ್ತೇನ ದುರ್ಲಭೇನಾತ್ಮಮೃತ್ಯುನಾ ।
ಗೃಹಾಪತ್ಯಾಪ್ತಪಶುಭಿಃ ಕಾ ಪ್ರೀತಿಃ ಸಾಧಿತೈಶ್ಚಲೈಃ ॥ (11–3–20)

33) ಏವಂ ಲೋಕಂ ಪರಂ ವಿದ್ಯಾನ್ನಶ್ವರಂ ಕರ್ಮನಿರ್ಮಿತಃ ।
ಅತುಲ್ಯಾತಿಶಯ ಧ್ವಂಸಾತ್ ಯಥಾಮಂಡಲವರ್ತಿನಾಂ ॥ (11–3–21)

34) ತಸ್ಮಾದ್ಗುರುಂ ಪ್ರಪದ್ಯೇತ ಜಿಜ್ಞಾಸುಃ ಶ್ರೇಯ ಉತ್ತಮಂ।
ಶಾಬ್ದೇ ಏಕೇ ಚ ನಿಷ್ಣಾತಂ ಬ್ರಹ್ಮಣ್ಯುಪಶಮಾಶ್ರಯಮ್ ॥ (11–3–22)

35) ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇತ್ ಗುರ್ವಾತ್ಮದೈವತಃ ।
ಅಮಾಯಯಾಽನುವೃತ್ಯಾಚ ತುಷ್ಯೇದಾತ್ಮಾಽಽತ್ಮದೋ ಹರಿಃ ॥ (11–3–23)

ಎಲ್ಲ ದುರ್ವಿಷಯಗಳಿಂದ ಮನಸ್ಸನ್ನು ತೆಗೆದು ವೈರಾಗ್ಯವನ್ನು ಹೊಂದಿ, ಮೊದಲು ಸಜ್ಜನರಲ್ಲಿ ಸ್ನೇಹವನ್ನು, ಪ್ರಾಣಿಗಳಲ್ಲಿ ಅವರ ಯೋಗ್ಯತಾನುಗುಣವಾಗಿ ಅಂದರೆ ಅಧಮರಲ್ಲಿ ಅಂತಃಕರಣವನ್ನು ಸಮಾನರಲ್ಲಿ ಸುಹೃದ್‌ಭಾವವನ್ನು, ಉತ್ತಮರಲ್ಲಿ ವಿನಯವನ್ನು ನಿಶ್ಚಯವಾಗಿ ಮಾಡಬೇಕು.[36]

ಬಾಹ್ಯಾಂತರ ಶುದ್ಧಿಯನ್ನು, ತಪ, ಉಪವಾಸ ಮೊದಲಾದವುಗಳನ್ನು ಮನಸ್ಸು ವಿಕಾರವಾಗದಂತೆ ಇರುವುದನ್ನು, ಲೌಕಿಕ ಹರಟೆವರ್ಜನೆಯನ್ನು, ಸಚ್ಛಾಸ್ತ್ರ ಅಧ್ಯಯನವನ್ನು, ಮನೋವಾಕ್ಕರ್ಮಗಳಲ್ಲಿ ವೈಪರೀತ್ಯವಿಲ್ಲದಿರುವುದನ್ನು, ಸಕಲ ಇಂದ್ರಿಯಗಳಿಗೆ ಭಗವಂತನಲ್ಲಿ ನಿಷ್ಠೆಯನ್ನು, ಸಜ್ಜನರಲ್ಲಿ ಮನಸ್ಸಿನಿಂದಲೂ ಅನಿಷ್ಟ ಚಿಂತಿಸದಿರುವುದನ್ನು, ದೈವೇಚ್ಛೆಯಿಂದ ಮಾನ, ಅವಮಾನ ಮೊದಲಾದ ದ್ವಂದ್ವಗಳು ಬಂದಾಗ ಅವುಗಳಿಂದ ವ್ಯಗ್ರನಾಗದಿರುವುದನ್ನು ಕಲಿಯಬೇಕು.[37]

ಎಲ್ಲದೇಶಕಾಲಗಳಲ್ಲಿ ತನಗೆ ಸ್ವಾಮಿಯಾದ ಭಗವಂತನ ಮಾಹಾತ್ಮ್ಯಕ್ಕೆ ಅನುಕೂಲವಾದ ನಿರೀಕ್ಷಣೆಯನ್ನು,ಏಕಾಂತಭಕ್ತಿಯನ್ನು,ಭಗವಂತನು ಪ್ರಕೃತಿಬಂಧನದಿಂದ ನಿತ್ಯಮುಕ್ತನೆಂಬುವದನ್ನು, ಭಗವಂತನೇ ಆಶ್ರಯನೆಂಬ ನಿತ್ಯಭಾವನೆಯನ್ನು, ದುಃಸಹವಾಸವಿಲ್ಲದ ಏಕಾಂತವನ್ನು, ವಲ್ಕಲ ಮುಂತಾದ ವಸ್ತುಗಳ ಧಾರಣೆಯನ್ನು, ದೈವಲಬ್ಧವಾದ ಯಾವುದರಿಂದಲಾದರೂ ಅಲಂಬುದ್ಧಿಯನ್ನು ಕಲಿಯಬೇಕು.[38]

ಪಂಚರಾತ್ರ ಮೊದಲಾದ ಸದಾಗಮಗಳಲ್ಲಿ, ಅವುಗಳಲ್ಲಿ ಹೇಳಿದ ವಿಷಯವು ಯಥಾರ್ಥವೆಂಬ ಆಸ್ತಿಕ್ಯಬುದ್ಧಿಯನ್ನು, ಮತ್ತು ಇವುಗಳಿಂದ ತನಗೆ ಇಹಪರಗಳಲ್ಲಿ ಪ್ರಯೋಜನವುಂಟೆಂಬವಿಶ್ವಾಸವನ್ನು, ವೇದಾಂಗಗಳಾದ ಜ್ಯೋತಿಃಶಾಸ್ತ್ರ ಮೊದಲಾದ ಕಲಾವಿದ್ಯೆಗಳಲ್ಲಿ ಆಸಕ್ತಿಯನ್ನು, ಪ್ರಾವೀಣ್ಯವನ್ನು, ಮನಸ್ಸು, ಮಾತು, ಶರೀರಗಳನ್ನು,

---

36) ಸರ್ವತೋ ಮನಸೋಽಸಂಗಮಾದೌ ಸಂಗಂ ಚ ಸಾಧುಷು ।
ದಯಾಂ ಮೈತ್ರೀಂ ಪ್ರಶ್ರಯಂ ಚ ಭೂತೇಷ್ವದ್ಧಾ ಯಥೋಚಿತಂ॥ (11-3-24)

37) ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯಮಾರ್ಜವಂ ।
ಬ್ರಹ್ಮಚರ್ಯಮಹಿಂಸಾಂ ಚ ಸಮತ್ವಂ ದ್ವಂದ್ವಸಂಜ್ಞಯೋಃ ॥ (11-3-25)

38) ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಕೈವಲ್ಯಮನಿಕೇತನಮ್ ।
ವಿವಿಕ್ತಚೀರವಸನಂ ಸಂತೋಷಂ ಯೇನಕೇನಚಿತ್ ॥ (11-3-26)

ಭಗವಂತನಿಗೆ ಅನುಕೂಲವಾದ ವೃತ್ತಿಯಲ್ಲಿ ನಿಗ್ರಹಿಸುವದನ್ನು, ಮತ್ತು ಸಜ್ಜನರಿಗೆ ಹಿತವಾದ ಮಾತುಗಳನ್ನು, ಭಗವನ್ನಿಷ್ಠೆ, ಇಂದ್ರಿಯನಿಗ್ರಹ ಇವುಗಳನ್ನು ಕಲಿಯಬೇಕು.[39]

ಆಶ್ಚರ್ಯಕರವಾದ ಸೃಷ್ಟ್ಯಾದಿ ವ್ಯಾಪಾರಗಳುಳ್ಳ ಶ್ರೀಹರಿಯ ಅವತಾರಗಳು, ದುಷ್ಟನಿಗ್ರಹ, ಶಿಷ್ಟಪರಿಪಾಲನರೂಪವಾದ ಕರ್ಮಗಳು, ಜ್ಞಾನಾನಂದಾದಿಗಳು ಇವುಗಳನ್ನು ಗುರುಮುಖದಿಂದ ತಿಳಿದುಕೊಳ್ಳುವದು, ವರ್ಣಿಸುವುದು, ನಿರಂತರ ಸ್ಮರಣೆಮಾಡುವದು, ತಾನು ಮನೋವಾಕ್ಕಾಯಗಳಿಂದ ಮಾಡುವ ಎಲ್ಲ ವ್ಯಾಪಾರಗಳು ಭಗವಂತನ ಆರಾಧನೆಗಾಗಿಯೇ ಎಂಬ ಅನುಸಂಧಾನವನ್ನು ಕಲಿಯಬೇಕು.[40]

ಯಾಗ, ದಾನ, ತಪಸ್ಸು, ಜಪ ಇವುಗಳನ್ನು, ತಾನು ನಿರ್ಮಿಸಿದ ಕೆರೆ, ಬಾವಿ ಮುಂತಾದವುಗಳನ್ನು ತನಗೆ ಪ್ರಿಯವಾದ ದೇಹ ಮೊದಲಾದವುಗಳನ್ನು, ಹೆಂಡತಿ, ಮಕ್ಕಳು, ಮನೆ, ಪ್ರಾಣ ಮೊದಲಾದವುಗಳನ್ನು ಭಗವಂತನ ಪ್ರೀತಿಗಾಗಿ ಸಮರ್ಪಿಸಬೇಕು.[41]

ಇಲ್ಲಿ ಯತ್ಕರೋಷಿ ಯದಶ್ನಾಸಿ...........ತತ್ಕುರುಷ್ವ ಮದರ್ಪಣಮ್ (9–27) ಈ ಗೀತಾ ವಾಕ್ಯವನ್ನು ನೆನಪಿಸಿಕೊಳ್ಳಬೇಕು.

ಈ ರೀತಿಯಾಗಿ ಶ್ರೀಕೃಷ್ಣನೇ ಸ್ವಾಮಿಯೆಂದು ಸೇವಿಸುತ್ತಿರುವ ಮನುಷ್ಯರಲ್ಲಿಯೂ ಸಹ ಸ್ನೇಹಭಾವವನ್ನು, ಭಗವಂತ ಮತ್ತು ಭಗವದ್ಭಕ್ತರಲ್ಲಿ ಅಂದರೆ ಬ್ರಹ್ಮಾದಿ ದೇವತೆಗಳಲ್ಲಿ, ಅಷ್ಟೇ ಅಲ್ಲದೇ ಸ್ವೋತ್ತಮರಾದ ಸಜ್ಜನರಲ್ಲಿಯೂ ಸಹ ಶುಶ್ರೂಷಾ ವೃತ್ತಿಯನ್ನು ಕಲಿಯಬೇಕು.[42]

---

39) ಶ್ರದ್ಧಾಂ ಭಾಗವತೇ ಶಾಸ್ತ್ರೇಽನಿಂದಾಮನ್ಯತ್ರ ಚಾಪಿ ಹಿ ।
ಮನೋವಾಕ್ಕಾಯದಂಡಂ ಚ ಸತ್ಯಂ ಶಮದಮಾವಪಿ ॥ (11–3–27)

40) ಶ್ರವಣಂ ಕೀರ್ತನಂ ಧ್ಯಾನಂ ಹರೇರದ್ಭುತಕರ್ಮಣಃ ।
ಜನ್ಮಕರ್ಮಗುಣಾನಾಂ ಚ ತದರ್ಥೇಽಖಿಲಚೇಷ್ಟಿತಮ್ ॥ (11–3–28)

41) ಇಷ್ಟಂ ದತ್ತಂ ತಪೋ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಮ್ ।
ದಾರಾನ್ ಸುತಾನ್ ಗೃಹಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್ ॥ (11–3–29)

42) ಏವಂ ಕೃಷ್ಣಾತ್ಮನಾಥೇಷು ಮನುಷ್ಯೇಷು ಚ ಸೌಹೃದಮ್ ।
ಪರಿಚರ್ಯಾಂ ಚೋಭಯತ್ರ ಮಹತ್ಸು ನೃಷು ಸಾಧುಷು ॥ (11–3–30)

ಪವಿತ್ರವಾದ ಭಗವಂತನ ಕೀರ್ತನೆಗಳನ್ನು ಪ್ರಕಾಶಿಸುವದಕ್ಕಾಗಿ ಒಬ್ಬೊಬ್ಬರಿಗೆ ಭಗವಂತನ ಮಹಾತ್ಮೆಯನ್ನು ಪುನಃಪುನಃ ಹೇಳುವದು, ಚರಿತಾನುವಾದದಿಂದ ಪರಸ್ಪರ ಸುಖವು ಪರಸ್ಪರ ಅಧಿಕಾಧಿಕಸೌಖ್ಯವು, ಪರಸ್ಪರ ಅಂತಃಕರಣದ ವಿಷಯ ವಿಮುಖತೆ ಇವೆಲ್ಲವುಗಳನ್ನು ಕಲಿಯಬೇಕು. [43]

ಭಕ್ತರು ಪರಸ್ಪರವಾಗಿ ಪಾಪರಾಶಿಗಳನ್ನು ಪರಿಹರಿಸುವ ಭಗವಂತನನ್ನು ಸ್ಮರಿಸುತ್ತ ಮತ್ತು ಸ್ಮರಣೆಗೆ ತಂದುಕೊಡುತ್ತ ಇವುಗಳಿಂದ ಉಂಟಾದ ಭಕ್ತ್ಯುದ್ರೇಕದಿಂದ ರೋಮಾಂಚಿತವಾದ ದೇಹವನ್ನು ಧರಿಸುತ್ತಾರೆ.[44]

ನಾಶರಹಿತವಾದ ಭಗವಂತನ ಧ್ಯಾನದಿಂದ ಉಂಟಾದ ಆನಂದದಿಂದ ಭಕ್ತರು ಕೆಲವುಸಲ ಅಳುತ್ತಾರೆ, ಕೆಲವುಸಲ ನಗುತ್ತಾರೆ, ಹಿಗ್ಗುತ್ತಾರೆ, ಅವನ ಮಹಿಮೆಯನ್ನು ವರ್ಣಿಸುತ್ತಾರೆ. ಈ ರೀತಿಯಾಗಿ ಲೋಕಬಾಹ್ಯರಾದ ಭಕ್ತರು ಕುಣಿಯುತ್ತಾರೆ. ಹಾಡುತ್ತಾರೆ, ಜನನರಹಿತನಾದ ಭಗವಂತನನ್ನು ಎಲ್ಲ ರೀತಿಯಿಂದ ಅನುಸರಿಸಿ ಆತನಿಗೆ ಸಮ್ಮತವಾದ ರೀತಿಯಲ್ಲಿ ಕರ್ಮಗಳನ್ನು ಆಚರಿಸುತ್ತಾರೆ, ಭಗವಂತನನ್ನು ಶರಣುಹೊಂದಿ ಸುಖನಿಮಗ್ನರಾಗಿ ಎಲ್ಲ ವ್ಯಾಪಾರಗಳನ್ನು ಬಿಟ್ಟು ಧ್ಯಾನಾಸಕ್ತರಾಗುತ್ತಾರೆ.[45]

ಈ ಪ್ರಕಾರವಾಗಿ ಸಾಧಕನು ಭಾಗವತಧರ್ಮಗಳನ್ನು ತಿಳಿದುಕೊಂಡು ಆ ಧರ್ಮಗಳ ಅಭ್ಯಾಸ ಉದ್ರೇಕದಿಂದ ಉಂಟಾದ ಭಕ್ತಿಯಿಂದ ಸರ್ವಪ್ರಕಾರದಿಂದಲೂ ನಾರಾಯಣನೇ ಸರ್ವೋತ್ತಮನೆಂಬ ನಿರ್ಣಯವುಳ್ಳವನಾಗಿ ಇತರರಿಂದ ದಾಟಲು ಅಶಕ್ಯವಾದ ಪ್ರಕೃತಿ ಬಂಧವನ್ನು ಚೆನ್ನಾಗಿ ದಾಟುತ್ತಾನೆ. [46]

---

43) ಪರಸ್ಪರಾನುಕಥನಂ ಪಾವನಂ ಭಗವದ್ಯಶಃ ।
ಮಿಥೋರತಿರ್ಮಿಥಸ್ತುಷ್ಟಿರ್ನಿವೃತ್ತಿರ್ಮಿಥ ಆತ್ಮನಃ ॥ (11–3–31)

44) ಸ್ಮರಂತಃ ಸ್ಮಾರಯಂತಶ್ಚ ಮಿಥೋಽಘೌಘಹರಂ ಹರಿಮ್ ।
ಭಕ್ತಾಃ ಸಂಜಾತಯಾ ಭಕ್ತ್ಯಾ ಬಿಭ್ರತ್ಯುತ್ಪುಲಕಾಂ ತನುಮ್ ॥ (11–3–32)

45) ಕ್ವಚಿದ್ರುದಂತ್ಯಚ್ಯುತ ಚಿಂತಯಾ ಕ್ವಚಿದ್
ಹಸಂತಿ ನಂದಂತಿ ವದಂತ್ಯಲೌಕಿಕಾಃ ।
ನೃತ್ಯಂತಿ ಗಾಯಂತ್ಯನುಶೀಲಯಂತ್ಯಜಂ
ಭವಂತಿ ತೂಷ್ಣೀಂ ಪರಮೇತ್ಯನಿರ್ವೃತಾಃ ॥ (11–3–33)

46) ಇತಿ ಭಾಗವತಾನ್ ಧರ್ಮಾನ್ ಶಿಕ್ಷನ್ ಭಕ್ತ್ಯಾ ತದುತ್ಥಯಾ ।
ನಾರಾಯಣಪರೋ ಮಾಯಾಮಂಜಸ್ತರತಿ ದುಸ್ತರಾಮ್ ॥ (11–3–34)

**ನಿಮಿರಾಜರು ಗುಣಪೂರ್ಣನಾದ ಶ್ರೀನಾರಾಯಣನ ಸರ್ವೋತ್ತಮತ್ವವನ್ನು ನಮಗೆ ತಿಳಿಸಬೇಕೆಂಬ ಉತ್ಕಟ ಇಚ್ಛೆಯನ್ನು ಮಾಡಿದಾಗ ಪಿಪ್ಪಲಾಯನರೆಂಬ ಜ್ಞಾನಿಗಳು ಉಪದೇಶಿಸುತ್ತಾರೆ.**

ಯಾವನು ಪ್ರಮಾಣಸಿದ್ಧವಾದ ತನ್ನಿಂದ ಭಿನ್ನವಾದ ಅಖಿಲಜಗತ್ತಿನ ಸ್ಥಿತಿ, ಸೃಷ್ಟಿ, ಲಯ, ಜ್ಞಾನ, ನಿಯಮನ, ಅಜ್ಞಾನ, ಬಂಧ, ಮೋಕ್ಷವೆಂಬ ಅಷ್ಟಕಗಳಿಗೆ ನಿಮಿತ್ತಕಾರಣನೋ, ತನಗೆ ಕಾರಣವಿಲ್ಲದವನೋ, ಜಾಗ್ರತ, ಸ್ವಪ್ನ, ಸುಷುಪ್ತಿಯೆಂಬ ಅವಸ್ಥಾತ್ರಯಗಳಲ್ಲಿ ನಿರ್ದೋಷನಾಗಿ ಇರುವವನೋ ಅಷ್ಟೇ ಅಲ್ಲ ಪ್ರಲಯ ಮತ್ತು ಮುಕ್ತಿಯಲ್ಲಿ ನಿಯಾಮಕನಾಗಿರುವನೋ, ಯಾವನಿಂದ ಪ್ರೇರಿಸಲ್ಪಟ್ಟ ದೇಹೇಂದ್ರಿಯಾದಿಗಳು, ಪಂಚಪ್ರಾಣ, ಮನಸ್ಸು ಇವೆಲ್ಲವೂ ಪ್ರವರ್ತಿಸುವವೋ ಅವನೇ ಸರ್ವೋತ್ತಮನೆಂದು ತಿಳಿ.[47]

ಇಲ್ಲಿ ಕೆಳಗಿನ ಭಾಷ್ಯವಚನವನ್ನು ನೆನಪಿಸಿಕೊಳ್ಳಬೇಕು.

ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನಾಜ್ಞಾನಬಂಧಮೋಕ್ಷಾಯತಃ ।
ಉತ್ಪತ್ತಿ ಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರಾಷಾದ್ಯಸ್ಮಾತ್ಸಹರಿರೇಕರಾಟ್ ॥ ಬ್ರಹ್ಮಸೂತ್ರಭಾಷ್ಯ (1–1–2)

ಮನೋಭಿಮಾನಿಗಳು, ಸರಸ್ವತಿ ಮೊದಲಾದವರು ಕೂಡ ನಾರಾಯಣನನ್ನು ಸ್ವತಂತ್ರವಾಗಿ ಸಾಕಲ್ಯೇನ ತಿಳಿಯಲಾರರು. ಸೂರ್ಯನು, ದೇಹಾಭಿಮಾನಿಯಾದ ಬ್ರಹ್ಮದೇವರು, ವಾಯುದೇವರು, ಪ್ರಾಣ, ಇಂದ್ರಿಯಾಭಿಮಾನಿಗಳು ಸಹ ತಿಳಿಯಲಾರರು. ಹೇಗೆ ಅಗ್ನಿಯ ಸ್ವಕೀಯರಾದ ಪುತ್ರರು ಪ್ರಧಾನಾಗ್ನಿಯನ್ನು ಅವನ ಅನುಗ್ರಹವಿಲ್ಲದೇ ತಿಳಿಯುವದಿಲ್ಲವೋ ಹಾಗೆ ಆ ಭಗವಂತನ ಅನುಗ್ರಹವಿಲ್ಲದೇ ಯಾರೂ ಸಾಕಲ್ಯೇನ ತಿಳಿಯಲಾರರು. ಸ್ವಲ್ಪ ಮಾತ್ರ ತಿಳಿಯುವರೆಂದರ್ಥವು.[48]

---

47) **ಪಿಪ್ಪಲಾಯನ ಉವಾಚ–**
ಸ್ಥಿತ್ಯುದ್ಭವಪ್ರಲಯಹೇತುರಹೇತುರಸ್ಯ
ಯಃ ಸ್ವಪ್ನಜಾಗರ ಸುಷುಪ್ತಿಷು ಸನ್ ಬಹಿಶ್ಚ ।
ದೇಹೇಂದ್ರಿಯಾಸುಹೃದಯಾನಿ ಚರಂತಿ ಯೇನ
ಸಂಜೀವಿತಾನಿ ತದವೈಹಿ ಪರಂ ನರೇಂದ್ರ ॥ (11–3–36)

48) ನೈನಂ ಮನೋ ವಿಶತಿ ವಾಗುತ ಚಕ್ಷುರಾತ್ಮಾ
ಪ್ರಾಣೇಂದ್ರಿಯಾಣ್ಯಪಿ ಯಥಾಽನಲಮರ್ಚಿಷಃ ಸ್ವಾಃ ।
ಶಬ್ದೋಽಪ್ಯಬೋಧಕ ನಿಷೇಧತಯಾಽಽತ್ಮಮೂಲ
ಮರ್ಥೋಕ್ತಮಾಹ ಯದೃತೇ ನ ನಿಷೇಧ್ಯ ಸಿದ್ಧಿಃ॥ (11–3–37)

ಆ ಭಗವಂತನು ಹುಟ್ಟಲಿಲ್ಲ. ಸಾಯುವುದಿಲ್ಲ. ಬೆಳೆಯುವುದಿಲ್ಲ. ಹ್ರಾಸ ಹೊಂದುವದಿಲ್ಲ. ಶತ್ರುವಿನಿಂದ ಗಾಯಗೊಳಿಸಲ್ಪಡುವುದಿಲ್ಲ. ಆ ಭಗವಂತನು ಎಲ್ಲ ರೂಪಗಳಲ್ಲಿ ಯಾವಾಗಲೂ ನಾಶರಹಿತನಾದ ಜ್ಞಾನರೂಪನಾಗಿದ್ದಾನೆ.[49]

ಯಾವಾಗ ಪದ್ಮನಾಭನ ಪಾದಸೇವೆಯಿಂದ ಪ್ರತಿದಿನದಲ್ಲಿ ಪ್ರವರ್ಧಮಾನವಾದ ಶ್ರೇಷ್ಠ ಭಕ್ತಿಯಿಂದ ಮನಸ್ಸಿನ ಸತ್ವಾದಿ ಗುಣಕರ್ಮಗಳಿಂದ ಉಂಟಾದ ಕಲ್ಮಷಗಳು ಪರಿಹೃತವಾಗುತ್ತವೆಯೋ ಆವಾಗ ಮನಸ್ಸು ನಿರ್ಮಲವಾಗುತ್ತಿರಲು ಭಗವಂತನ ಸ್ವರೂಪವು, ಹೇಗೆ ನಿರ್ಮಲವಾದ ಕಣ್ಣುಗಳಿರುವಲ್ಲಿ ಸೂರ್ಯಪ್ರಕಾಶವು ಕಾಣುವದೋ ಹಾಗೇ ಅಪರೋಕ್ಷೀಕರಿಸಲ್ಪಡುತ್ತದೆ.[50]

**ನಿಮಿರಾಜರು ಕರ್ಮಯೋಗದ ಕುರಿತು ಪ್ರಶ್ನೆ ಮಾಡುತ್ತಿರಲು ಆವಿರ್ಹೋತ್ರ ಎಂಬ ಜ್ಞಾನಿಗಳು ಉಪದೇಶಮಾಡುತ್ತಾರೆ.**

ಈ ಕರ್ಮವು ಪ್ರಶಸ್ತವಾದುದು. ಈ ಕರ್ಮವು ಮಾಡಲು ಅಯೋಗ್ಯವಾದುದು. ಇದು ವಿರುದ್ಧವಾದ ಕರ್ಮವು, ಎಂಬುದನ್ನು ವೇದಗಳಲ್ಲಿ ತಿಳಿಸಲಾಗಿದೆ. ವೇದಬಾಹ್ಯರಾದ ಲೌಕಿಕ ಜನರಿಗೆ ಇದು ತಿಳಿಯುವದಿಲ್ಲ. ಆದರೆ ವೇದವಿಚಾರ ಕುಶಲರಾದವರಿಗೆ ಮಾತ್ರ ತಿಳಿಯುತ್ತದೆ. ಏಕಂದರೆ ವೇದಕ್ಕೆ ಈಶ್ವರನೇ ವಿಷಯನಾಗಿರುವದರಿಂದ ವೇದಾರ್ಥವಿಚಾರದಲ್ಲಿ ಸೂಕ್ಷ್ಮಜ್ಞಾನಿಗಳೂ ಸಹ ಭಗವಂತನ ಅನುಗ್ರಹವಿಲ್ಲದಿದ್ದರೆ ಭ್ರಮೆಯನ್ನುಹೊಂದುತ್ತಾರೆ.[51]

---

49) ನಾಸೌ ಜಜಾನ ನ ಮರಿಷ್ಯತಿ ನೇಧತೇಽಸೌ
ನ ಕ್ಷೀಯತೇ ಸ ಚ ನ ವಿಧ್ಯತಿ ಚಾರಿಣಾ ಹಿ ।
ಸರ್ವತ್ರ ಶಶ್ವದನಪಾಯ್ಯುಪಲಬ್ಧಿಮಾತ್ರಂ
ಪ್ರಾಣೋ ಯಥೇಂದ್ರಿಯ ಬಲೇನ ವಿಕಲ್ಪಿತಂ ತತ್ ॥ (11–3–39)

50) ಯರ್ಹ್ಯಬ್ಜನಾಭ ಚರಣೇಷಣಯೋರುಭಕ್ತ್ಯಾ
ಚೇತೋಮಲಾನಿ ವಿಧಮೇದ್ಗುಣಕರ್ಮಜಾನಿ ।
ತಸ್ಮಿನ್ ವಿಶುದ್ಧ ಉಪಲಭ್ಯತ ಆತ್ಮತತ್ವಂ
ಸಾಕ್ಷಾದ್ಯಥಾಽಮಲದೃಶೌ ಸವಿತೃ ಪ್ರಕಾಶಃ (11–3–41)

**ಆವಿರ್ಹೋತ್ರ ಉವಾಚ**

51) ಕರ್ಮಾಕರ್ಮವಿಕರ್ಮೇತಿ ವೇದವಾದೋ ನ ಲೌಕಿಕಃ ।
ವೇದಸ್ಯ ಚೇಶ್ವರಾತ್ಮತ್ವಾತ್ ತತ್ರ ಮುಹ್ಯಂತಿ ಸೂರಯಃ ॥ (11–3–44)

ಇಲ್ಲಿ ಕರ್ಮ ಎಂದರೆ ಈಶ್ವರಾರ್ಪಣ ಬುದ್ಧಿಯಿಂದ ಮಾಡುವ ಅನುಷ್ಠಾನವು. ಅಕರ್ಮ ಎಂದರೆ ಪೂರ್ವೋಕ್ತಕರ್ಮವಿರುದ್ಧವಾದ ಅನುಷ್ಠಾನವು. ಕರ್ಮವಿಕರ್ಮಗಳು ವೇದದಿಂದ ಮುಖ್ಯವಾಗಿ ಪ್ರತಿಪಾದ್ಯವಾಗಿವೆ ಎಂಬುದಾಗಿ ಶ್ರೀ ಶ್ರೀನಿವಾಸತೀರ್ಥರು ತಿಳಿಸಿದ್ದಾರೆ.

ಈ ಪ್ರಸಂಗದಲ್ಲಿ ಕರ್ಮಣ್ಯಕರ್ಮಯಃ ಪಶ್ಯೇದಕರ್ಮಣಿ ಚ ಕರ್ಮ ಯಃ॥ ಗೀತಾ (4–18) ಶ್ಲೋಕದ ವ್ಯಾಖ್ಯಾನವನ್ನು ಕೂಡ ಅವಲೋಕಿಸಬಹುದು.

ವೇದವು ಗೂಢವಾಗಿ ಭಗವತ್ಸ್ವರೂಪವನ್ನು ಹೇಳುತ್ತದೆ. ಅಂದರೆ ಪರಮಮುಖ್ಯ ವೃತ್ತಿಯಿಂದ ಭಗವಂತನನ್ನೇ ಪ್ರತಿಪಾದಿಸುತ್ತದೆ. ಅಮುಖ್ಯವಾಗಿ ಕರ್ಮವನ್ನು ಹೇಳುತ್ತದೆ. ಕರ್ಮವನ್ನು ಏಕೆ ಪ್ರತಿಪಾದಿಸುತ್ತದೆಂದರೆ ಅಜ್ಞಾನಿಗಳಿಗೆ ಶಿಕ್ಷಣವನ್ನು ಮಾಡುವದಕ್ಕಾಗಿ ಮತ್ತು ದುಷ್ಕರ್ಮಮೋಚನೆಗಾಗಿ ಕರ್ಮಗಳನ್ನು ವಿಧಿಸುತ್ತದೆ. [52]

ಯಾವನು ಸರ್ವಪೂಜಿತನಾದ ಇಷ್ಟಪ್ರದನಾದ ಭಗವದ್ವಿಷಯಕಜ್ಞಾನ ಇಲ್ಲದವನಾಗಿರುವನೋ, ಆಕಾರಣದಿಂದ ವಿಷಯಲಂಪಟನೋ ಅಂತಹ ಪುರುಷನು ವೇದದಲ್ಲಿ ಹೇಳಿದ ಕರ್ಮವನ್ನು ಆಚರಿಸುವನೋ ಅವನು ವೇದವಿರುದ್ಧವಾದ ಕರ್ಮಾನುಷ್ಠಾನದಿಂದ ಅತ್ಯಂತ ದುಃಖವನ್ನು ಹೊಂದುತ್ತಾನೆ.[53]

ಅವನೇ ಒಂದುವೇಳೆ ಫಲಾಪೇಕ್ಷೆ ಇಲ್ಲದೇ ಭಗವಂತನಲ್ಲಿ ಅರ್ಪಿತವಾದ ವೇದಗಳಲ್ಲಿ ಹೇಳಿದ ಕರ್ಮಗಳನ್ನು ಮಾಡುವವನಾದರೆ ಮೋಕ್ಷರೂಪವಾದ ಫಲವನ್ನು ಹೊಂದುತ್ತಾನೆ. ವೇದೋಕ್ತ ಕರ್ಮಗಳಲ್ಲಿ ಅಭಿರುಚಿಯನ್ನು ಹುಟ್ಟಿಸಲು ಫಲಶ್ರುತಿಗಳು ಹೊರಟಿವೆ.[54]

---

52) ಪರೋಕ್ಷವಾದೋ ವೇದೋಽಯಂ ಬಾಲಾನಾಂ ಅನುಶಾಸನಮ್ ।
ಕರ್ಮಮೋಕ್ಷಾಯ ಕರ್ಮಾಣಿ ವಿಧತ್ತೇ ಹ್ಯಗದಂ ಯಥಾ ॥ (11–3–45)

53) ನಾಚರೇದ್ಯಸ್ತು ವೇದೋಕ್ತಂ ಸ್ವಯಮಜ್ಞೋಽಜಿತೇಂದ್ರಿಯಃ ।
ವಿಕರ್ಮಣಾ ಹ್ಯಧರ್ಮೇಣ ಮೃತ್ಯೋರ್ಮೃತ್ಯುಮುಪೈತಿ ಸಃ ॥ (11–3–46)

54) ವೇದೋಕ್ತಮೇವ ಕುರ್ವಾಣೋ ನಿಸ್ಸಂಗೋಽರ್ಪಿತಮೀಶ್ವರೇ ।
ನೈಷ್ಕರ್ಮ್ಯಂ ಲಭತೇ ಸಿದ್ಧಿಂ ರೋಚನಾರ್ಥಂ ಫಲಶ್ರುತಿಃ ॥ (11–3–47)

ಯಾವನು ಶೀಘ್ರದಲ್ಲಿ ತನಗೆ ಪ್ರಕೃತಿಬಂಧದಿಂದ ಉಂಟಾದ ಅಹಂಕಾರ ಮಮಕಾರ ರೂಪವಾದ ಹೃದಯಗ್ರಂಥಿಯನ್ನು ಪರಮಾತ್ಮನ ಅನುಗ್ರಹದಿಂದ ಕಳೆದುಕೊಳ್ಳಲು ಇಚ್ಛಿಸುವನೋ ಅವನು ಪಂಚರಾತ್ರದಲ್ಲಿ ಹೇಳಿದ ವಿಧಾನದಿಂದ ಕ್ರೀಡಾದಿಗುಣವಿಶಿಷ್ಟನಾದ ಭಗವಂತನನ್ನು ಪೂಜಿಸಬೇಕು.[55]

ಅವಸರಮಾಡದೇ ಅಂದರೆ ಬಹುಕಾಲ ಪರೀಕ್ಷಿಸಿ ಗುರುಗಳನ್ನು ಹೊಂದಿ ಆ ಗುರುಗಳಿಂದ ಶಾಸ್ತ್ರಸಂಪ್ರದಾಯಗಳನ್ನು ಚೆನ್ನಾಗಿ ತಿಳಿದುಕೊಂಡು ಆ ಭಗವಂತನನ್ನು ತನಗೆ ಇಷ್ಟವಾದ ಪ್ರತಿಮೆಯಲ್ಲಿ ಪೂಜಿಸಬೇಕು.[56]

ಸ್ನಾನಮಾಡಿ ಶುದ್ಧನಾಗಿ ಭಗವಂತನ ಪ್ರತಿಮೆಯ ಮುಂದೆ ಕುಳಿತು ಪ್ರಾಣಾಯಾಮಾದಿಗಳಿಂದ ಶರೀರವನ್ನು ಶುದ್ಧಮಾಡಿಕೊಂಡು ಅಂಗನ್ಯಾಸಗಳನ್ನು ಮಾಡಿಕೊಂಡು ಆತ್ಮರಕ್ಷಣೆಯುಳ್ಳನಾಗಿ ಭಗವಂತನನ್ನು ಪೂಜಿಸಬೇಕು.[57]

ವಿಧಿವತ್ತಾಗಿ ತುಳಸಿ,ಗಂಧ ಮೊದಲಾದ ಪೂಜಾ ಸಾಮಗ್ರಿಗಳನ್ನು ಸಂಪಾದಿಸಿಕೊಂಡು ಶಿಲೆ ಮೊದಲಾದ ಪ್ರತಿಮೆಗಳು, ಸ್ಥಂಡಿಲ, ಹೃದಯದಲ್ಲಿ ವಾಸನಾಮಯ ಪ್ರತಿಮೆಗಳನ್ನು ಸಂಪಾದಿಸಿ ಬಾಹ್ಯ ಪ್ರತಿಮೆಗಳನ್ನು ಪೂಜಿಸುವಾಗ ಪ್ರಾಣಪ್ರತಿಷ್ಠಾಪನೆಯನ್ನುಮಾಡಿ ಪೂಜಿಸಬೇಕು.[58]

ಅನಂತರ ಪಾದ್ಯಾದಿಗಳಿಗೆ ಪಾತ್ರೆಗಳನ್ನು ಶೋಧಿಸಿಟ್ಟುಕೊಂಡು, ಆವಾಹನೆಮಾಡಿ ಧ್ಯಾನಾಸಕ್ತರಾಗಿ, ಹೃದಯಾದಿಗಳಲ್ಲಿ ಮಂತ್ರದಿಂದ ನ್ಯಾಸಮಾಡಿಕೊಂಡು, ಮೂಲಮಂತ್ರವಾದ "ನಾರಾಯಣ ಅಷ್ಟಾಕ್ಷರ" ಮಂತ್ರದಿಂದ ಪೂಜಿಸಬೇಕು.[59]

---

55) ಯ ಆಶು ಹೃದಯಗ್ರಂಥಿಂ ನಿರ್ಜಿಹೀರ್ಷುಃ ಪರಾತ್ಮನಃ ।
ವಿಧಿನೋಪಚರೇದ್ದೇವಂ ತಂತ್ರೋಕ್ತೇನ ಚ ಕೇಶವಮ್ ॥ (11–3–48)

56) ಲಬ್ಧ್ವಾನುಗ್ರಹ ಆಚಾರ್ಯಾತ್ ತೇನ ಸಂದರ್ಶಿತಾಗಮಃ ।
ಮಹಾಪುರುಷಮಭ್ಯರ್ಚೇನ್ಮೂರ್ತ್ಯಾಽಭಿಮತಯಾಽಽತ್ಮನಃ ॥ (11–3–49)

57) ಶುಚಿಃ ಸಮ್ಮುಖಆಸೀನಃ ಪ್ರಾಣಸಂಯಮನಾದಿಭಿಃ ।
ಪಿಂಡಂ ಸಂಶೋಧ್ಯ ಸಂನ್ಯಾಸಕೃತರಕ್ಷೋಽರ್ಚಯೇದ್ಧರಿಮ್ ॥ (11–3–50)

58) ಅರ್ಚಾದೌ ಹೃದಯೇ ವಾಽಪಿ ಯಥಾ ಲಬ್ಧೋಪಚಾರಕೈಃ ।
ದ್ರವ್ಯಕ್ಷಿತ್ಯಾತ್ಮಲಿಂಗಾನಿ ನಿಷ್ಪಾದ್ಯ ಪ್ರೋಕ್ಷ್ಯಚಾಸನಮ್ ॥ (11–3–51)

59) ಪಾದ್ಯಾದೀನುಪಕಲ್ಪ್ಯಾಥ ಸನ್ನಿಧಾಪ್ಯಸಮಾಹಿತಃ ।
ಹೃದಯಾದಿಕೃತನ್ಯಾಸೋ ಮೂಲಮಂತ್ರೇಣ ಚಾರ್ಚಯೇತ್ ॥ (11–3–52)

ಚಕ್ರಾದಿಚಿಹ್ನೆಗಳಿಂದ ಕೂಡಿದ ಅಥವಾ ಕೇಶವಾದಿ ಮೂರ್ತಿಯುಕ್ತವಾದ ಬ್ರಹ್ಮಾದಿ ಪರಿವಾರದೇವತೆಗಳು ಇವರಿಂದ ಕೂಡಿದ ವಿಷ್ವಕ್ಸೇನ ಮೊದಲಾದ ಪಾರ್ಷದರಿಂದ ಯುಕ್ತವಾದ ಆಯಾ ವೇದವ್ಯಾಸ, ಹಯಗ್ರೀವ ಮೊದಲಾದಮೂರ್ತಿಗಳನ್ನು ವೇದವ್ಯಾಸಾದಿ ಮಂತ್ರಗಳಿಂದ ಅರ್ಘ್ಯ, ಪಾದ್ಯ, ಆಚಮನ ಮೊದಲಾದವುಗಳಿಂದ ಸ್ನಾನ, ವಸ್ತ್ರ, ಅಲಂಕಾರಗಳಿಂದ ಪೂಜಿಸಬೇಕು.[60]

ಪರಿವಾರದೇವತೆಗಳಿಂದ ಕೂಡಿದ ಶ್ರೀಹರಿಯನ್ನು ಗಂಧ, ಅಕ್ಷತೆ, ಮಾಲೆ, ಧೂಪ, ದೀಪ, ನೈವೇದ್ಯ ಮೊದಲಾದವುಗಳಿಂದ ಪೂಜಿಸಿ, ಸ್ತೋತ್ರಗಳಿಂದ ಸ್ತುತಿಸಿ ಭಗವಂತನಿಗೆ ನಮಿಸಬೇಕು.[61]

ತನ್ನನ್ನು ವಿಷ್ಣುವಿನ ದಾಸನೆಂದು ತಿಳಿದು ಭಗವಂತನ ಮೂರ್ತಿಯನ್ನು ಪೂಜಿಸಬೇಕು. ನಿರ್ಮಾಲ್ಯವನ್ನು ತಲೆಯಲ್ಲಿ ಧರಿಸಿ ಪೂಜಿತನಾದ ಭಗವಂತನನ್ನು ತನ್ನ ಹೃದಯದಲ್ಲಿ ಉಪಸಂಹರಿಸಿ ದೇವರ ಪ್ರತಿಮೆಯನ್ನು ಪೆಟ್ಟಿಗೆಯಲ್ಲಿ ಇಡಬೇಕು.[62]

ಇಲ್ಲಿ ಶ್ರೀವಾದಿರಾಜಪೂಜ್ಯಚರಣರು ತಿಳಿಸಿದ "ಹರಿ ನಿರ್ಮಾಲ್ಯವ ಶಿರದಿ ಧರಿಸುತಿರು" ಉಕ್ತಿಯನ್ನು ಸ್ಮರಿಸಬಹುದು.

ಈ ರೀತಿಯಾಗಿ ಬೆಂಕಿ,ಸೂರ್ಯ,ನೀರು ಮೊದಲಾದವುಗಳಲ್ಲಿ, ತನ್ನ ಹೃದಯದಲ್ಲಿ ಯಾರು ಯಜ್ಞನಿಯಾಮಕನಾದ, ಸ್ವತಂತ್ರನಾದ, ವ್ಯಾಪ್ತನಾದ, ಭಗವಂತನನ್ನು ಪೂಜಿಸುವನೋ ಅವನು ಶೀಘ್ರದಲ್ಲಿಯೇ ಮುಕ್ತನಾಗುತ್ತಾನೆ.[63]

---

60) ಸಾಂಗೋಪಾಂಗಾಂ ಸಪಾರ್ಷದಾಂ ತಾಂ ತಾಂ ಮೂರ್ತಿಂ ಸ್ವಮಂತ್ರತಃ ।
ಪಾದ್ಯಾರ್ಘ್ಯಾಚಮನೀಯಾದ್ಯೈಃ ಸ್ನಾನವಾಸೋವಿಭೂಷಣೈಃ ॥ (11–3–53)

61) ಗಂಧಮಾಲ್ಯಾಕ್ಷತ ಸ್ರಗ್ಭಿಃ ಧೂಪದೀಪೋಪಹಾರಕೈಃ ।
ಸಾಂಗಂ ಸಂಪೂಜ್ಯ ವಿಧಿವತ್ ಸ್ತವೈಃ ಸ್ತುತ್ವಾ ನಮೇದ್ಧರಿಮ್ ॥(11–3–54)

62) ಆತ್ಮಾನಂ ತನ್ಮಯಂಧ್ಯಾಯನ್ ಮೂರ್ತಿಂ ಸಂಪೂಜಯೇದ್ಧರೇಃ ।
ಶೇಷಮಾಧಾಯಶಿರಸಿ ಸ್ವಧಾಮ್ನ್ಯುದ್ವಾಸ್ಯ ಸತ್ಕೃತಮ್ ॥ (11–3–55)

63) ಏವಮಗ್ನ್ಯರ್ಕ ತೋಯಾದಾವರ್ಚಯೇದ್ಧೃದಯೇ ಚ ಯಃ ।
ಯಜ್ಞೇಶ್ವರಂ ಸ್ವಮಾತ್ಮಾನಮಚಿರಾನ್ಮುಚ್ಯತೇ ಹಿ ಸಃ ॥ (11–3–56)

**ಭಗವಂತನ ಗುಣ, ಕರ್ಮಗಳ ಕುರಿತು ನಿಮಿರಾಜನು ಪ್ರಶ್ನೆ ಮಾಡಲು ದ್ರುಮಿಲರೆಂಬ ಜ್ಞಾನಿಗಳು ಭಗವಂತನ ಗುಣಕರ್ಮಗಳು ಅನಂತವಾಗಿವೆಯೆಂದು ಉಪದೇಶಿಸುತ್ತಾರೆ.**

ಯಾರು ದೇಶಕಾಲಗುಣಗಳಿಂದ ಅಪರಿಮಿತನಾದ ಭಗವಂತನ ಅನಂತವಾದ ಗುಣಗಳನ್ನು ಹೇಳುವೆನೆಂದು ಪ್ರಾರಂಭಿಸುವನೋ, ಅವನು ಅಜ್ಞನು ಏಕೆಂದರೆ ಹೇಗಾದರೂ ಮಾಡಿ ಬಹುಕಾಲ ಕಷ್ಟಪಟ್ಟು ಪೃಥಿವಿಯಲ್ಲಿರುವ ಕಣಗಳನ್ನು ಎಣಿಸಬಹುದು ಆದರೆ ಸರ್ವಶಕ್ತನಾದ ಭಗವಂತನ ಗುಣಗಳನ್ನು ಎಣಿಸಲು ಅಸಾಧ್ಯ (ಸಾಧ್ಯವಿಲ್ಲ) [64]. ಈ ವಿಷಯದಲ್ಲಿ ಅನೇಕ ಪ್ರಮಾಣಗಳು ಹೀಗಿವೆ.

ವಿಷ್ಣೋರ್ನುವೀರ್ಯಗಣನಾಂ ಕತಮೋರ್ಹತೀಹ
ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ॥ ಶ್ರೀಮದ್ ಭಾಗವತ (2-7-40)

ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ॥

ನೈವೋದಾಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯಃ ॥ ದ್ವಾದಶಸ್ತೋತ್ರ

ಶ್ರೀ ಜಗನ್ನಾಥದಾಸರು ತಮ್ಮ "ಫಲವಿದುಬಾಳ್ದುದಕೆ" ಕೃತಿಯಲ್ಲಿ ಇದನ್ನೇ ಮಾರ್ಮಿಕವಾಗಿ ತಿಳಿಸಿದ್ದಾರೆ.

ಮೇದಿನಿ ಪರಮಾಣ್ವಂಬುಕಣಂಗಳ ನೈದಬಹುದು ಪರಿಗಣಿತಿಯನು ।
ಮಾಧವನಾನಂದಾದಿ ಗುಣಂಗಳನಾದಿಕಾಲದಿಂದಗಣಿತವೆಂಬುದೇ ॥

ಯಾವಾಗ ಭಗವಂತನು ಅಹಂಕಾರತತ್ತ್ವ, ಮಹತ್ತತ್ತ್ವ ಮತ್ತು ಪಂಚಭೂತಗಳನ್ನು ಸೃಷ್ಟಿಮಾಡಿದನೋ, ಯಾವಾಗ ಮಹದಾದಿ 24 ತತ್ವಗಳಿಂದ ವಿರಾಟ್‌ನಾಮಕ ಬ್ರಹ್ಮಾಂಡವನ್ನು ಸೃಷ್ಟಿಸಿ ತನ್ನ ಅಂಶದಿಂದ ಪ್ರವೇಶಿಸಿದನೋ, ಯಾವಾಗ ತನ್ನಿಂದ ಸೃಷ್ಟಿಸಲ್ಪಟ್ಟ ಪೃಥಿವೀ, ಅಪ್, ತೇಜ, ವಾಯು, ಆಕಾಶ ಈ ಪಂಚಭೂತಗಳಿಂದ ಬ್ರಹ್ಮಾಂಡದೊಳಗೆ ದೇಹಗಳನ್ನು ಸೃಷ್ಟಿಸಿ ಪ್ರವೇಶಮಾಡಿದನೋ ಆಗ ಪುರುಷನೆಂಬ ಹೆಸರನ್ನು ಪಡೆದನು.[65]

---

**ದ್ರುಮಿಲ ಉವಾಚ**

64) ಯೋ ವಾ ಅನಂತಸ್ಯ ಗುಣಾನನಂತಾನ್ ಅನುಕ್ರಮಿಷ್ಯೇತ್ಸತು ಬಾಲಬುದ್ಧಿಃ ।
ರಜಾಂಸಿ ಭೂಮೇರ್ಗಣಯೇತ್ಕಥಂಚಿತ್ ಕಾಲೇನ ನೈವಾಖಿಲಶಕ್ತಿಧಾಮ್ನಃ ॥
(11-4-2)

65) ಭೂತೈರ್ಯದಾ ಪಂಚಭಿರಾತ್ಮಸೃಷ್ಟೈಃಪುರಂ ವಿರಾಜಂ ವಿರಚಯ್ಯ ತಸ್ಮಿನ್ ।
ಸ್ವಾಂಶೇನವಿಷ್ಟಃ ಪುರುಷಾಭಿಧಾನಮವಾಪ ನಾರಾಯಣ ಆದಿದೇವಃ ॥
(11-4-3)

ಈ ಮೂರು ಲೋಕದ ಸ್ಥಿತಿಯು ಭಗವಂತನ ಶರೀರವನ್ನು ಆಧರಿಸಿಕೊಂಡಿದೆ. ಜೀವರ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳು, ಜ್ಞಾನರೂಪದಿಂದಲೂ, ಕ್ರಿಯಾರೂಪದಿಂದಲೂ, ಶರೀರವನ್ನು ಪ್ರವೇಶಿಸುವ ಶ್ರೀಹರಿಯ ಇಂದ್ರಿಯಗತವಾದ ಭಗವದ್ರೂಪಗಳಿಂದ ಬಲ, ಓಜಸ್ಸು, ವ್ಯಾಪಾರಗಳು ಪ್ರೇರಿತವಾಗಿವೆ.[66]

ಈ ಜಗತ್ತಿನ ಸೃಷ್ಟಿಗೋಸ್ಕರ ರಜೋಗುಣದಿಂದ ಆ ಚತುರ್ಮುಖ ಬ್ರಹ್ಮದೇವರ ದೇಹವನ್ನು ಮತ್ತು ಜಗತ್ ಸೃಷ್ಟಿವಿಷಯಕ ಇಚ್ಛೆಯನ್ನು ಹುಟ್ಟಿಸಿ ಸೃಷ್ಟಿಯ ಆದಿಭಾಗದಲ್ಲಿ ಚತುರ್ಮುಖಬ್ರಹ್ಮರೂಪದಿಂದ ಬ್ರಹ್ಮಾಂತರ್ಗತನಾಗಿ ಬ್ರಹ್ಮನೆಂದಾದನು. ಸತ್ವಗುಣದಿಂದ ಜಗತ್ತಿನ ಸ್ಥಿತಿಗಾಗಿ ಯಜ್ಞನಿಯಾಮಕನಾದ ಬ್ರಾಹ್ಮಣಧರ್ಮಕ್ಕೆ ಆಶ್ರಯನಾದ ವಿಷ್ಣು ಆದನು. ಜಗತ್ತಿನ ಸಂಹಾರಕ್ಕಾಗಿ ರುದ್ರದೇವರನ್ನು ತಮೋಗುಣದಿಂದ ಸೃಷ್ಟಿಸಿ ಅವನ ಅಂತರ್ಯಾಮಿಯಾಗಿ ರುದ್ರನಾದನು. ಪುರುಷಾಕಾರದಿಂದ ಸೃಷ್ಟಿಸ್ಥಿತಿ ಪ್ರಲಯ ಸಾಧನ ಪುರುಷನಾಮಕನಾದನು.[67]

ಧರ್ಮನಿಂದ ದಕ್ಷಪ್ರಜಾಪತಿಯುಮಗಳಾದ ಮೂರ್ತಿಯೆಂಬುವಳಲ್ಲಿ ಸ್ವವಿಷಯಕಜ್ಞಾನರೂಪನಾದ ಮತ್ತು ಸ್ವಪ್ರಭಾವರೂಪನಾದ ನರನಾರಾಯಣನೆಂದು ಅವತರಿಸಿದನು. ಅವನು ನಿಷ್ಕಾಮಕರ್ಮರೂಪ ಮುಕ್ತಿಸಾಧನವನ್ನು ಉಪದೇಶಿಸಿದನು. ಸಜ್ಜನರ ಶಿಕ್ಷಣಾರ್ಥವಾಗಿ ತಾನೂ ಯೋಗವನ್ನು ಅನುಷ್ಠಾನಮಾಡಿದನು. ಅವನು ಈಗಲೂ ಋಷಿಶ್ರೇಷ್ಠರಿಂದ ಪೂಜಿತವಾದ ಪಾದಪದ್ಮಗಳುಳ್ಳವನಾಗಿ ಇದ್ದಾನೆ.[68]

---

66) ಯತ್ಕಾಯ ಏಷ ಭುವನತ್ರಯ ಸನ್ನಿವೇಶೋ
ಯಸ್ಯೇಂದ್ರಿಯೈಸ್ತನುಭೃತಾಮುಭಯೇಂದ್ರಿಯಾಣಿ ।
ಜ್ಞಾನಾಂಶಕೇನ ವಿಶತೋ ಬಲಮೋಜ ಈಹಾ
ಸತ್ವಾದಿಭಿಃ ಸ್ಥಿತಿಲಯೋದ್ಭವ ಆದಿಕರ್ತಾ ॥ (11–4–4)

67) ಆದಾವಭೂತಚ್ಛತಧೃತೀ ರಜಸಾಽಸ್ಯಸರ್ಗೇ
ವಿಷ್ಣುಃ ಸ್ಥಿತೌ ಕ್ರತುಪತಿರ್ದ್ವಿಜಧರ್ಮಸೇತುಃ ।
ರುದ್ರೋಽಪ್ಯಯಾಯ ತಮಸಾ ಪುರುಷಃ ಸ ಆದ್ಯ
ಇತ್ಯುದ್ಭವಸ್ಥಿತಿಲಯಾಃ ಸತತಂ ಪ್ರಜಾಸು ॥ (11–4–5)

68) ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ
ನಾರಾಯಣೋನರ ಇತಿ ಸ್ವತಪಃ ಪ್ರಭಾವಃ ।
ನೈಷ್ಕರ್ಮಲಕ್ಷ್ಮಣಮುವಾಚ ಚಚಾರ ಯೋಗ
ಮದ್ಯಾಪಿ ಚಾಸ್ತ ಋಷಿವರ್ಯನಿಷೇವಿತಾಂಘ್ರಿಃ ॥ (11–4–6)

ಭಗವಂತನೇ! ನಿನ್ನನ್ನು ಭಜಿಸತಕ್ಕವರಿಗೆ ದೇವತೆಗಳಿಂದ ಉಂಟಾದ, ಯಾವ ವಿಘ್ನಗಳಿರುವೋ ಅವುಗಳನ್ನು ದಾಟಿ ನಿನ್ನ ಸರ್ವೋಚ್ಚ ಸ್ಥಾನವನ್ನು ಯಾರು ಹೊಂದುವದಿಲ್ಲ ? ಹೊಂದುವುದೇ ಆದರೆ ಅವರು ವಾಯುದೇವರೊಬ್ಬರೇ. ಹಾಗಿದ್ದಲ್ಲಿ ವಾಯುದೇವರೊಬ್ಬರನ್ನು ಬಿಟ್ಟು ಇತರ ಭಜಕರಿಗೆ ಭಗವತ್ ಪ್ರಾಪ್ತಿರೂಪ ಮೋಕ್ಷವಾಗಲಾರದು. ಹೀಗೆ ಶಂಕೆ ಬಂದರೆ ಭಗವಂತನ ಅನುಗ್ರಹವಿದ್ದರೆ, ಯಾವ ಅಪತ್ತುಕೂಡ ದಾಟಲಶಕ್ಯವಲ್ಲವೆಂದು ಹೇಳುತ್ತಾರೆ. ಯಜ್ಞದಲ್ಲಿ ಸ್ವತಂತ್ರನಾದ ನಿನ್ನ ಭಾಗವಾದ ಪೂಜಾವನ್ನು ಸಮರ್ಪಿಸುವ ಅಧಿಕಾರಿಗೆ ವಿಘ್ನಗಳ ಮೇಲೆ ಪಾದವನ್ನು ಇಟ್ಟಿದ್ದೇ ಆದರೆ ಆ ಪೂಜೆಯು ಮತ್ತೊಬ್ಬರಿಗೆ ಸೇರಲಾರದು. ವಿಘ್ನಗಳನ್ನು ಪಾದದಿಂದ ಮೆಟ್ಟದಿದ್ದಲ್ಲಿ ಬಲಿಯೂ ಕೂಡ ನಿನ್ನ ಪ್ರೀತಿಜನಕವಾಗಲಾರದು. ಕಾರಣ ನೀನೇ ಕರ್ಮವನ್ನು ಸಂರಕ್ಷಿಸುವವನಾಗಿರುವಿ.ಸಂಪೂರ್ಣ ಭಗವದ್ಭಕ್ತಿ ಪ್ರಧಾನಕರ್ಮವು ಶ್ರೀಹರಿಗೆ ಅತ್ಯಂತ ಪ್ರೀತಿಕರವು.[69]

ಭಗವಂತನ, ಹಂಸ, ದತ್ತ, ಕುಮಾರ, ಋಷಭ, ಹಯಗ್ರೀವ, ಸನತ್ಕುಮಾರ, ಮತ್ಸ್ಯಾದಿ ದಶಾವತಾರಗಳು ಎಲ್ಲವೂ ಅಗಾಧ ಮಹಾತ್ಮ್ಯವುಳ್ಳದ್ದಾಗಿವೆಯೆಂದು ಉಪದೇಶಿಸಿದರು. ಹಾಗೆಯೇ ಅಮಿತಕೀರ್ತಿಶಾಲಿಯಾದ ಶ್ರೀಹರಿಯ ಕಾರ್ಯಗಳು, ಅವತಾರಗಳು ಅನಂತವಾಗಿವೆಯೆಂದು ತಿಳಿಸಿದರು.[70]

**ಚಮಸರೆಂಬ ಜ್ಞಾನಿಗಳು ನಿಮಿರಾಜನನ್ನು ಕುರಿತು ಹೀಗೆ ಉಪದೇಶಿಸುತ್ತಾರೆ.**

ಭಗವಂತನ ಮುಖ, ಭುಜ, ತೊಡೆ, ಹಾಗೂ ಪಾದಗಳಿಂದ ಆಯಾ ಆಶ್ರಮಗಳಿಂದ ಸಮೇತವಾದ ಪ್ರತ್ಯೇಕವಾಗಿ ಬ್ರಾಹ್ಮಣಾದಿವರ್ಣಗಳು ಶಮದಮಾದಿ ಗುಣಗಳಿಂದ ಜನಿಸಿದವು.[71]

---

69) ತ್ವಾಂ ಸುನ್ವತಾಂ ಸುರಕೃತಾ ಬಹವೋಽಂತರಾಯಾಃ
ಕಸ್ತಾನ್ ವಿಲಂಘ್ಯ ಪರಮಂ ವ್ರಜತಾತ್ ಪದಂ ತೇ ।
ನಾನ್ಯಸ್ಯ ಬರ್ಹಿಷಿ ಬಲಿಂ ದದತಃ ಸ್ವಭಾಗಂ
ಧತ್ತೇಪದಂ ತ್ವಮವಿತಾ ಯದಿ ವಿಘ್ನಮೂರ್ಧ್ನಿ॥ (11–4–10)

70) ಏವಂ ವಿಧಾನಿ ಕರ್ಮಾಣಿ ಜನ್ಮಾನಿ ಚ ಜಗತ್ಪತೇಃ ।
ಭೂರೀಣಿ ಭೂರಿಯಶಸೋ ವರ್ಣಿತಾನಿ ಮಹಾಭುಜ ॥ (11–4–23)

**ಚಮಸ ಉವಾಚ**

71) ಮುಖಬಾಹೂರುಪಾದೇಭ್ಯಃ ಪುರುಷಸ್ಯಾಶ್ರಮೈಃಸಹ ।
ಚತ್ವಾರೋ ಜಜ್ಞಿರೇ ವರ್ಣಾ ಗುಣೈರ್ವಿಪ್ರಾದಯಃ ಪೃಥಕ್ ॥ (11–5–2)

ಇಲ್ಲಿ ಪುರುಷಸೂಕ್ತದ " ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂರಾಜನ್ಯಕೃತಃ" ಈ ಮಂತ್ರದಲ್ಲಿ ಹೇಳಿರುವುದನ್ನು ಸ್ಮರಿಸಬಹುದು.

ದುಷ್ಟರಾದ ಜನರು ಸಂಪತ್ತಿನಿಂದ ಅಣಿಮಾದ್ಯೈಶ್ವರ್ಯದಿಂದ, ಸತ್ಕುಲದಲ್ಲಿ ಹುಟ್ಟಿ ಕೆಯಿಂದ, ಜ್ಞಾನದಿಂದ, ದಾನದಿಂದ, ಸೌಂದರ್ಯದಿಂದ, ಪರಾಕ್ರಮದಿಂದ, ಯಜ್ಞಯಾಗಾದಿಗಳಿಂದ ಉಂಟಾದ ಗರ್ವದಿಂದ ಶ್ರೀಹರಿಯಿಂದ ಸಹಿತರಾದ ಭಗವದ್ಭಕ್ತರಾದ ಸಜ್ಜನರನ್ನು ಗೌರವಿಸುವದಿಲ್ಲ.[72]

ಹಣಕ್ಕೆ ಧರ್ಮವೇ ಮುಖ್ಯಫಲವು, ಧರ್ಮದ ನಂತರ ವೈರಾಗ್ಯವು, ವಿಶೇಷವಿಜ್ಞಾನಸಹಿತವಾದ ಜ್ಞಾನವು ಉಂಟಾಗುತ್ತದೆ. ಜ್ಞಾನಾನಂತರದಲ್ಲಿ ಉತ್ತಮವಾದ ಮೋಕ್ಷವು ದೊರೆಯುತ್ತದೆ. ಇಂತಹ ಧನವನ್ನು ಯಾರು ವಿಷಯಭೋಗಕ್ಕಾಗಿ, ಮಡದಿಮಕ್ಕಳಿಗಾಗಿ ವಿನಿಯೋಗಿಸುವರೋ ಅವರು ಎಂದಿಗೂ ಬಿಡಿಸಲಾಗದ ಮೃತ್ಯುವನ್ನು ಕಾಣುವದೇ ಇಲ್ಲ.[73]

ಯಾರು ಧರ್ಮಸೂಕ್ಷ್ಮ ತಿಳಿಯದೇ, ನಾವೇ ಕರ್ಮಿಷ್ಠರೆಂದು ತಿಳಿದ ದುಷ್ಟರು ತಮ್ಮನ್ನು ನೆಚ್ಚಿರುವ ಪಶುಗಳನ್ನು ಹಿಂಸಿಸುವರೋ, ಆ ಪಶುಗಳು ಅಂತಹ ಜನರನ್ನೇ ಮರಣಾನಂತರದಲ್ಲಿ ತಿನ್ನುತ್ತವೆ. (ಅವರು ಕೊಂದ ಪಶುಗಳೇ ಇವರನ್ನು ತಿನ್ನುತ್ತವೆ.)[74]

---

72) ಶ್ರಿಯಾ ವಿಭೂತ್ಯಾಽಭಿಜನೇನ ವಿದ್ಯಯಾ
ತ್ಯಾಗೇನರೂಪೇಣ ಬಲೇನ ಕರ್ಮಣಾ ।
ಜಾತಸ್ಮಯೇನಾಂಧಧಿಯಃ ಸಹೇಶ್ವರಾನ್
ಸತೋಽವಮನ್ಯಂತಿ ಹರಿಪ್ರಿಯಾನ್ ಖಲಾಃ॥ (11–5–9)

73) ಧನಂ ಹಿ ಧರ್ಮೈಕಫಲಂಯತೋಽಸ್ಯ
ಜ್ಞಾನಂ ಸವಿಜ್ಞಾನಮನುಪ್ರಶಾಂತಿಃ ।
ಗೃಹೇಷು ಯುಂಜಂತಿ ಕಲೇವರಸ್ಯ
ಮೃತ್ಯುಂ ನ ಪಶ್ಯಂತಿ ದುರಂತವೀರ್ಯಮ್ । (11–5–13)

74) ಯೇತ್ವನೇವಂ ವಿದೋಽಸಂತಃ ಸ್ತಬ್ಧಾಃ ಸದಭಿಮಾನಿನಃ ।
ಪಶೂನ್ ದ್ರುಹ್ಯಂತಿ ವಿಸ್ರಬ್ಧಾನ್ ಪ್ರೇತ್ಯ ಖಾದಂತಿ ತೇ ಚ ತಾನ್ ॥(11–5–14)

ಸ್ವಾಧಾರನಾದ, ತನ್ನಲ್ಲಿಯೇ ವ್ಯಾಪ್ತನಾದ, ಬೇರೆ ದೇಹಗಳಲ್ಲೂ ಸನ್ನಿಹಿತನಾದ ಜೀವರಿಂದ ಭಿನ್ನನಾದ ಶ್ರೀಹರಿಯನ್ನು ದ್ವೇಷಿಸುತ್ತ, ಮೃತ್ಯುಗ್ರಸ್ತವಾದ ದೇಹಾನುಬಂಧಿಗಳಾದ ಪುತ್ರ ಮಿತ್ರ ಕಳತ್ರಾದಿಗಳಿಂದ ಕೂಡಿದ ಈ ದೇಹದಲ್ಲಿ ಮೋಹಗೊಂಡವರಾಗಿ ತಮಸ್ಸಿನಲ್ಲಿ ಬೀಳುತ್ತಾರೆ.[75]

ಯಾರು ಯಥಾರ್ಥಜ್ಞಾನವನ್ನು ಪಡೆದಿಲ್ಲವೋ, ಯಾರು ಪಂಡಿತನೆಂದು ತಿಳಿದವರೋ, ಅವರು ಪುಣ್ಯಸಾಧನವಾದ ದೇಹವುಳ್ಳ ತಮ್ಮನ್ನು ತಮಸ್ಸಿಗೆ ಕಳುಹಿಸುತ್ತಾರೆ.[76]

ಧರ್ಮ, ಅರ್ಥ, ಕಾಮ ಇದೇ ಪುರುಷಾರ್ಥವೆಂದು ಬಗೆದ ತ್ರೈವರ್ಣಿಕರಲ್ಲಿ ಯಾರು ಭಗವಂತನ ದ್ವೇಷ ಮಾಡುವರೋ, ಅವರು ತಮಸ್ಸನ್ನು ಹೊಂದುತ್ತಾರೆ. ಅಂದರೆ ಕೇವಲ ದುಃಖಹೊಂದುತ್ತಾರೆ. ಇನ್ನು ಶಾಂತಿಯಿಲ್ಲದೇ ಕಾಮಾದಿ ಭೋಗದಿಂದ ತೃಪ್ತರಾಗದೇ ಭಗವಂತನಲ್ಲಿ ವಿಮುಖರಾಗಿ, ತಾವು ಅಜ್ಞಾನಿಗಳಾಗಿದ್ದರೂ. ಜ್ಞಾನಿಗಳೆಂಬ ದುರ್ಭಾವನೆ ಹೊಂದಿದವರು ತಾವು ಮಾಡಬೇಕಾದ ಕರ್ಮಗಳನ್ನು ಪೂರೈಸದೇ ಅತಿಕಷ್ಟದಿಂದ ಸಂಪಾದಿಸಿದ ಮನೆ, ಮಡದಿ, ಮಕ್ಕಳು, ಸಂಪತ್ತು ಎಲ್ಲವನ್ನೂ ಬಿಟ್ಟು ಕಾಲನಾಮಕ ಪರಮಾತ್ಮನಿಂದ ನಷ್ಟ ಮನೋರಥವುಳ್ಳವರಾಗಿ ಶ್ವಾಸೋಚ್ಛ್ವಾಸ ರೂಪವಾದ ಸುಖದಿಂದಲೂ ರಹಿತವಾದ ತಮಸ್ಸನ್ನು ಹೊಂದುವರು.[77]

**ನಿಮಿರಾಜರು ಯಾವ ಯಾವ ಕಾಲದಲ್ಲಿ ಭಗವಂತನು ಯಾವ ಯಾವ ರೂಪ, ನಾಮ, ಲಕ್ಷಣಗಳಿಂದ ಕೂಡಿದವನಾಗಿರುತ್ತಾನೆಂದು ಕೇಳಲು ಕರಭಾಜನರೆಂಬ ಜ್ಞಾನಿಗಳು ಉತ್ತರಿಸುತ್ತಾರೆ.**

---

75) ದ್ವಿಷಂತಃ ಪರಕಾಯೇಷು ಸ್ವಾತ್ಮಾನಂ ಹರಿಮೀಶ್ವರಮ್ ।
ಮೃತಕೇ ಸಾನುಬಂಧೇಽಸ್ಮಿನ್ ಬದ್ಧಸ್ನೇಹಾಃ ಪತಂತ್ಯಧಃ । (11–5–15)

76) ಯೇ ಕೈವಲ್ಯಸಂಪ್ರಾಪ್ತಾ ಯೇ ಚಾತೀತಾಶ್ಚ ಮೂಢತಾಮ್ ।
ತ್ರೈವರ್ಗಿಕಾಭಿಜನ್ಮಾನಮಾತ್ಮಾನಂ ಪಾತಯಂತಿ ತೇ ॥ (11–5–16)

77) ಯೇ ತತ್ರಾತ್ಮಹನೋಽಶಾಂತಾ ಅಜ್ಞಾನೇ ಜ್ಞಾನಮಾನಿನಃ ।
ಸೀದಂತ್ಯಕೃತಕೃತ್ಯಾವೈ ಕಾಲಧ್ವಸ್ತಮನೋರಥಾಃ ॥ (11–5–17)
ಹಿತ್ವಾತ್ಯಾಯಾಸರಚಿತ ಗೃಹಾಪತ್ಯಸುಹೃಚ್ಛ್ರಿಯಃ।
ತಮೋವಿಶಂತ್ಯನುಚ್ಛ್ವಾಸಂ ವಾಸುದೇವ ಪರಾಙ್ಮುಖಾಃ ॥ (11–5–18)

ಕೃತ, ತ್ರೇತಾ, ದ್ವಾಪರ, ಕಲಿ ಈ ಯುಗಗಳಲ್ಲಿ ಭಗವಂತನು ಬೇರೆ ಬೇರೆ ರೂಪ ನಾಮ ವರ್ಣಗಳಿಂದ ನಾನಾ ಪ್ರಕಾರವಾಗಿ ಭಿನ್ನಭಿನ್ನ ರೀತಿಯ ಜನರಿಂದ ಪೂಜಿಸಲ್ಪಡುವನು.[78]

ಕೃತಯುಗದಲ್ಲಿ ಭಗವಂತನು ಶುಕ್ಲವರ್ಣದಿಂದ ಕೂಡಿದವನಾಗಿ ನಾಲ್ಕು ಕೈಗಳುಳ್ಳವನಾಗಿ, ಜಟಾಯುಕ್ತನಾಗಿ, ನಾರುಬಟ್ಟೆಯುಟ್ಟವನಾಗಿ, ದಂಡ, ಕಮಂಡಲು, ಕೃಷ್ಣಾಜಿನ, ಯಜ್ಞೋಪವೀತ, ಅಕ್ಷಮಾಲಾಗಳನ್ನು ಧರಿಸಿರುತ್ತಾನೆ. ಇಂಥ ಶ್ರೀಹರಿಯನ್ನು ಜನರು ಪೂಜಿಸುತ್ತಾರೆ.[79]

ತ್ರೇತಾಯುಗದಲ್ಲಿ ಭಗವಂತನು ಕೆಂಪುವರ್ಣವುಳ್ಳವನಾಗಿಯೂ, ನಾಲ್ಕು ಕೈಗಳುಳ್ಳವನಾಗಿಯೂ, ಮೂರು ಎಳೆಗಳಿಂದ ಮಾಡಿದ ಉಡದಾರದಿಂದ ಕೂಡಿದ, ಬಂಗಾರದ ಕೇಶಗಳಿಂದ ಕೂಡಿದ, ಋಗ್, ಯಜುಃಸಾಮ ಈ ರೀತಿಯಾಗಿ ಮೂರು ವಿಧವಾಗಿ ವಿಭಕ್ತವಾದ ವೇದಪ್ರತಿಪಾದ್ಯ ಸ್ವರೂಪನಾಗಿ,ಯಜ್ಞೋಪಯುಕ್ತವಾದ ಸ್ರುಕ್, ಸ್ರುವ ಮೊದಲಾದವುಗಳನ್ನು ಧರಿಸಿರುವನು.[80]

ದ್ವಾಪರಯುಗದಲ್ಲಿ ಭಗವಂತನು ಕಪ್ಪು ಬಣ್ಣ(ಇಂದ್ರನೀಲವರ್ಣ) ದವನು, ಪೀತಾಂಬರಧರಿಸಿ, ಶಂಖ ಚಕ್ರಾದ್ಯಾಯುಧಗಳಿಂದ ಯುಕ್ತನು, ಶ್ರೀವತ್ಸ ಮೊದಲಾದ ಚಿಹ್ನೆಗಳಿಂದ ಕೌಸ್ತುಭ, ವನಮಾಲಾ, ಛತ್ರ, ಚಾಮರ, ಮೊದಲಾದ ಚಕ್ರವರ್ತಿ ಲಕ್ಷಣಗಳಿಂದ ಕೂಡಿದವನು ಆಗಿರುತ್ತಾನೆ.[81]

---

**ಕರಭಾಜನ ಉವಾಚ**

78) ಕೃತಂ ತ್ರೇತಾ ದ್ವಾಪರಂ ಚ ಕಲಿರಿತ್ಯೇಷು ಕೇಶವಃ ।
ನಾನಾ ವರ್ಣಾಭಿಧಾಕಾರೋ ನಾನ್ಯೈವ ವಿಧಿನೇಜ್ಯತೇ ॥ (11–5–20)

79) ಕೃತೇ ಶುಕ್ಲಶ್ಚತುರ್ಬಾಹುರ್ಜಟಿಲೋ ವಲ್ಕಲಾಂಬರಃ।
ಕೃಷ್ಣಾಜಿನೋಪವೀತಾಕ್ಷಾನ್ ಬಿಭ್ರದ್ ದಂಡಕಮಂಡಲೂ ॥ (11–5–21)

80) ತ್ರೇತಾಯಾಂ ರಕ್ತವರ್ಣೋಽಸೌ ಚತುರ್ಬಾಹುಸ್ತ್ರಿಮೇಖಲಃ ।
ಹಿರಣ್ಯಕೇಶಸ್ತ್ರಯ್ಯಾತ್ಮಾ ಸ್ರುಕ್ ಸ್ರುವಾದ್ಯುಪಲಕ್ಷಣಃ ॥ (11–5–24)

81) ದ್ವಾಪರೇ ಭಗವಾನ್ ಶ್ಯಾಮಃ ಪೀತವಾಸಾನಿಜಾಯುಧಃ ।
ಶ್ರೀವತ್ಸಾದಿಭಿರಂಕೈಶ್ಚ ಲಕ್ಷಣೈರುಪಲಕ್ಷಿತಃ॥ (11–5–27)

ಕಲಿಯುಗದಲ್ಲಿ ಭಗವಂತನು ಕೃಷ್ಣವರ್ಣಯುಕ್ತನಾಗಿ, ಆಯುಧಾದಿಚಿಹ್ನೆಯಿಂದ ಕೂಡಿ ಪಾರ್ಷದರಿಂದ ಯುಕ್ತನಾಗಿರುತ್ತಾನೆ. ಇಂಥ ಕೃಷ್ಣನನ್ನು ಒಳ್ಳೆಯ ಬುದ್ಧಿಯುಳ್ಳವರು, ಸದಾ ಭಗವಂತನ ಕೀರ್ತನದಿಂದ ಕೂಡಿದ ಯಜ್ಞಗಳಿಂದ ಪೂಜಿಸುತ್ತಾರೆ.[82]

ಸರ್ವದಾ ಧ್ಯಾನಮಾಡಲು ಯೋಗ್ಯನಾದ ಭಕ್ತರ ಪರಾಭವವನ್ನು ಪರಿಹರಿಸುವ ಅಥವಾ ಪೂರ್ಣವಾಗಿ ಸಂಸಾರವನ್ನು ನಾಶಮಾಡುವ, ಭಕ್ತಾಭೀಷ್ಟಪ್ರದನಾದ, ಗಂಗಾದಿತೀರ್ಥಗಳಿಗೆ ಆಶ್ರಯವಾದ ರುದ್ರಬ್ರಹ್ಮಾದಿಗಳಿಂದವಂದ್ಯವಾದ,ಶರಣು ಹೊಂದಲು ಯೋಗ್ಯವಾದ, ಭಕ್ತರ ದುಃಖವನ್ನು ಕಳೆಯುವ, ಶರಣಾಗತರಕ್ಷಕನಾದ, ಸಂಸಾರಸಮುದ್ರಕ್ಕೆ ನಾವೆಯಂತಿರುವ ನಿನ್ನ ಪಾದಕಮಲಗಳನ್ನು ನಮಸ್ಕರಿಸುತ್ತೇವೆ.[83]

ಧರ್ಮಾತ್ಮನೇ! ಯಾವನ ಚರಣಕಮಲಗಳು ತಂದೆಯ ಮಾತಿನಿಂದ ದೇವತೆಗಳಿಂದ ಅಪೇಕ್ಷಿಸುವ, ಬಿಡಲಸಾಧ್ಯವಾದ ಸಾಮ್ರಾಜ್ಯವನ್ನು ಬಿಟ್ಟು ಅಡವಿಗೆ ಹೊರಟವೋ, ಮತ್ತು ಹೆಂಡತಿಯಾದ ಸೀತಾದೇವಿಯಿಂದ ಇಚ್ಛಿಸಿದ ಮಾಯಾಜಿಂಕೆಯನ್ನು ಬೆನ್ನತ್ತಿ ಓಡಿದವೋ ಅಂತಹ ನಿನ್ನ ಚರಣಕಮಲವನ್ನು ನಾವು ನಮಿಸುತ್ತೇವೆ.[84]

ಈ ರೀತಿಯಾಗಿ ಭಗವಂತನು ಯುಗಯುಗಕ್ಕೆ ಅನುಗುಣವಾದ ರೂಪವುಳ್ಳ,

---

82) ಕೃಷ್ಣವರ್ಣಂ ಕಲೌಕೃಷ್ಣಂ ಸಾಂಗೋಪಾಂಗಂ ಸಪಾರ್ಷದಮ್ ।
ಯಜ್ಞೈಃ ಸಂಕೀರ್ತನಪ್ರಾಯೈರ್ಯಜಂತಿ ಹಿ ಸುಮೇಧಸಃ ॥ (11–5–32)

83) ಧ್ಯೇಯಂ ಸದಾ ಪರಿಭವಘ್ನಮಭೀಷ್ಟದೋಹಂ ।
ತೀರ್ಥಾಸ್ಪದಂ ಶಿವವಿರಿಂಚನುತಂ ಶರಣ್ಯಮ್ ।
ಭೃತ್ಯಾರ್ತಿಹಂ ಪ್ರಣತಭಕ್ತಭವಾಬ್ಧಿಪೋತಂ
ವಂದಾಮಹೇ ಪುರುಷ ತೇ ಚರಣಾರವಿಂದಮ್ ॥ (11–5–33)

84) ತ್ಯಕ್ತ್ವಾ ಸುದುಸ್ತ್ಯಜ ಸುರೇಪ್ಸಿತರಾಜ್ಯಲಕ್ಷ್ಮೀಂ
ಧರ್ಮಿಷ್ಠ ಆರ್ಯವಚಸಾ ಯದಗಾದರಣ್ಯಮ್ ।
ಮಾಯಾಮೃಗಂ ದಯಿತಯೇಪ್ಸಿತಮನ್ವಧಾವದ್
ವಂದಾಮಹೇ ಪುರುಷ ತೇ ಚರಣಾರವಿಂದಮ್ ॥ (11–5–34)

ಮುಕ್ತಿಗೆ ನಿಯಾಮಕನಾದ ಪರಮಾತ್ಮನು ಯುಗಾನುಸಾರವಾಗಿ ನಡೆಯತಕ್ಕ ಮನುಷ್ಯರಿಂದ ಪೂಜಿಸಲ್ಪಡುತ್ತಾನೆ.[85]

ದೋಷಗಳು ಎಷ್ಟಿದ್ದರೂ, ಅವುಗಳನ್ನು ಬಿಟ್ಟು ಸಾರವನ್ನೇ ಗ್ರಹಣಮಾಡುವ, ಗುಣಗಳನ್ನು ತಿಳಿದ ದೊಡ್ಡವರು ಕಲಿಯನ್ನು ಗೌರವಿಸುವರು. ಕಲಿಯುಗದಲ್ಲಿ ಕೇವಲ ಭಗವಂತನ ನಾಮಸ್ಮರಣೆಯಿಂದಲೇ ಎಲ್ಲ ಅಭೀಷ್ಟಗಳು ದೊರೆಯುತ್ತವೆ.[86]

ಈ ಸಂಸಾರದಲ್ಲಿ ತೊಳಲಾಡುವ ಜನರಿಗೆ ಯಾವ ಯುಗಾನುಸಾರಿಯಾದ ಭಗವದ್ ಭಜನದಿಂದ ಸಂಸಾರವು ಕಲಿಯುಗದಲ್ಲಿ ನಾಶವಾಗುವುದೋ, ಮೋಕ್ಷವು ಹೊಂದಲ್ಪಡುವುದೋ ಅದಕ್ಕಿಂತಲೂ ಉತ್ತಮ ಶ್ರೇಯಸ್ಸು ಇಲ್ಲ.[87]

ರಾಜನೇ ! ಕೃತ ತ್ರೇತಾ ದ್ವಾಪರಗಳಲ್ಲಿರುವ ಜನರು, ಯಾವ ಕಲಿಯುಗದಲ್ಲಿ ಹರಿಸ್ಮರಣದಿಂದಲೇ ಜನರಿಗೆ ಭಗವಂತನು ಪುನರ್ಜನ್ಮರಾಹಿತ್ಯವನ್ನು ಕೊಡುವನೋ, ಅಂತಹ ಕಲಿಯುಗದಲ್ಲಿ ಜನ್ಮವನ್ನು ಇಚ್ಛಿಸುವರು.[88]

ಯಾರು ಎಲ್ಲ ರೀತಿಯಿಂದ ರಕ್ಷಕನಾದ ಶ್ರೀಹರಿಯನ್ನು ಮೊರೆ ಹೊಂದುವರೋ, ಅವರು ದೇವತೆಗಳ, ಋಷಿಗಳ, ಭೂತರ, ಆಪ್ತರ, ಮನುಷ್ಯರ, ಪಿತೃದೇವತೆಗಳ ಸೇವಕರಲ್ಲ ಋಣಿಯೂ ಅಲ್ಲ ತಮಗಿಂತ ಉತ್ತಮರನ್ನು ಬಿಟ್ಟು ಉಳಿದವರಿಗೆ ಸೇವಕರಲ್ಲ ಅವರ ಋಣವು ಇವರಿಗಿಲ್ಲ.[89]

---

85) ಏವಂ ಯುಗಾನುರೂಪೋಽಸೌ ಭಗವಾನ್ ಯುಗವರ್ತಿಭಿಃ ।
ಮನುಜೈರಿಜ್ಯತೇ ರಾಜನ್ ಶ್ರೇಯಸಾಮೀಶ್ವರೋ ಹರಿಃ ॥ (11–5–35)

86) ಕಲಿಂ ಸಂಭಾಜಯಂತ್ಯಾರ್ಯಾ ಗುಣಜ್ಞಾಃ ಸಾರಭಾಗಿನಃ ।
ಯತ್ರ ಸಂಕೀರ್ತನಾದೇವ ಸರ್ವಃ ಸ್ವಾರ್ಥೋಽಭಿಲಭ್ಯತೇ॥ (11–5–36)

87) ನಹ್ಯತಃ ಪರಮೋ ಲಾಭೋ ದೇಹಿನಾಂ ಭ್ರಾಮ್ಯತಾಮಿಹ ।
ಯತೋ ವಿಂದೇತ ಪರಮಾಂ ಶಾಂತಿಂ ನಶ್ಯತಿ ಸಂಸ್ಕೃತಿಃ ॥ (11–5–37)

88) ಕೃತಾದಿಷು ಪ್ರಜಾ ರಾಜನ್ ಕಲಾವಿಚ್ಛಂತಿ ಸಂಭವಮ್ ।
ಯತ್ರ ಸಂಕೀರ್ತನಾತ್ ನೃಣಾಂ ಹರಿರ್ದಾಸ್ಯತ್ಯಸಂಭವಮ್ ॥ (11–5=38)

89) ದೇವರ್ಷಿ ಭೂತಾಪ್ತ ನೃಣಾಂ ಪಿತೄಣಾಂ
ನ ಕಿಂಕರೋ ನಾಯಮೃಣೀ ಚ ರಾಜನ್ ।
ಸರ್ವಾತ್ಮನಾ ಯಃ ಶರಣಂ ಶರಣ್ಯಂ
ಗತೋ ಮುಕುಂದಂ ಪರಿಚರ್ಯಯಾ ಚ ॥ (11–5–42)

ಹೃದಯ ಗುಹೆಯಲ್ಲಿರುವ ಸರ್ವೋತ್ತಮನಾದ, ಶ್ರೀ ಹರಿಯು ತನ್ನ ಪಾದವನ್ನು ಭಜಿಸುವ, ನಾನು ಯಾವಾಗಲೂ ಭಗವಂತನ ಅಧೀನನೆಂದು ತಿಳಿದಿರುವ ಭಕ್ತನಿಗೆ ಬಲಿಷ್ಠವಾದ ಅದೃಷ್ಟದಿಂದ ಉಂಟಾದ ದುಷ್ಟಕರ್ಮವೇನಿದೆಯೋ ಆ ಎಲ್ಲವನ್ನು ನಾಶಮಾಡುತ್ತಾನೆ.[90]

ಇಲ್ಲಿ ಭಗವಂತನನ್ನು ಭಜಿಸಿದರೆ ಸಾಕು, ಇನ್ನುಳಿದ ದೇವತೆಗಳಲ್ಲಿ ಭಕ್ತಿ ಬೇಕಿಲ್ಲ ಎನ್ನುವಂತೆ ಕಾಣುತ್ತದೆ. ಇದು ಸರಿಯಲ್ಲ.

ಮುಖ್ಯವಾಗಿ ಶ್ರೀಹರಿಯನ್ನು ಭಜಿಸಬೇಕು. ಇನ್ನುಳಿದ ದೇವತೆಗಳನ್ನು ಹರಿಯಪರಿವಾರದವರೆಂದು ಭಜಿಸಬೇಕು. ಹೊರತು ಹರಿಯನ್ನು ಬಿಟ್ಟು ಪ್ರಧಾನವಾಗಿ ದೇವತೆಗಳಲ್ಲಿ ಭಕ್ತಿಯನ್ನು ಮಾಡಬಾರದು.

ಮಿಥಿಲಾಧೀಶನಾದ ನಿಮಿರಾಜನು ಈ ಪ್ರಕಾರವಾಗಿ ಭಾಗವತ ಧರ್ಮಗಳನ್ನು ಕೇಳಿ ಸಂತೋಷಯುಕ್ತನಾಗಿ ಗುರುಗಳಿಂದ ಸಮೇತನಾಗಿ ಜಾಯಂತೇಯರೆಂಬ ಜ್ಞಾನಿಗಳನ್ನು ಪೂಜಿಸಿದನು.[91]

---

90) ಸ್ವಪಾದಮೂಲಂ ಭಜತಃ ಪ್ರಿಯಸ್ಯ
ತ್ಯಕ್ತಾನ್ಯಭಾವಸ್ಯ ಹರಿಃ ಪರೇಶಃ।
ವಿಕರ್ಮಯಚ್ಚೋತ್ಪತಿತಂ ಕಥಂಚಿತ್
ಧುನೋತಿ ಸರ್ವಂ ಹೃದಿಸನ್ನಿವಿಷ್ಟಃ ॥ (11–5–43)

91) ಧರ್ಮಾನ್ ಭಾಗವತಾನಿತ್ಥಂ
ಶ್ರುತ್ವಾ ಸ ಮಿಥಿಲೇಶ್ವರಃ ।
ಜಾಯಂತೇಯಾನ್ ಮುನೀನ್ ಪ್ರೀತಃ
ಸೋಪಾಧ್ಯಾಯೋ ಹ್ಯಪೂಜಯತ್ ॥ (11–5–44)

ಸಿದ್ಧರಾದ ಆ ಜ್ಞಾನಿಗಳು ಎಲ್ಲ ಜನರು ನೋಡುತ್ತಿರುವಾಗಲೇ ಕಣ್ಣಿಗೆ ಕಾಣದಾದರು. ವಿದೇಹರಾಜನು ಧರ್ಮಗಳನ್ನು ಆಚರಿಸುತ್ತ ಉತ್ತಮವಾದ ಗತಿಯನ್ನು ಹೊಂದಿದನು.[92]

ಈ ಇತಿಹಾಸವನ್ನು ಸಮಾಧಾನ ಮನಸ್ಸಿನಿಂದ ಯಾವನು ಕೇಳುವನೋ ಅವನು ಇಹದಲ್ಲಿ ಪಾಪಗಳನ್ನು ಕಳೆದುಕೊಂಡು ತನ್ನ ಯೋಗ್ಯತೆಗೆ ಅನುಗುಣವಾಗಿ ಪೂರ್ಣಾನಂದವನ್ನು ಹೊಂದಲು ಯೋಗ್ಯನಾಗುತ್ತಾನೆ.[93]

ಶ್ರೀಮಧ್ವೇಶಾರ್ಪಣಮಸ್ತು

*****

---

92) ತೇ ಚಾಂತರ್ದಧಿರೇ ಸಿದ್ಧಾಃ ಸರ್ವಲೋಕಸ್ಯ ಪಶ್ಯತಃ ।
ರಾಜಾ ಧರ್ಮಾನುಪಾತಿಷ್ಠನ್ನವಾಪ ಪರಮಾಂ ಗತಿಮ್ ॥ (11–5–45)

93) ಇತಿಹಾಸಮಿಮಂ ಪುಣ್ಯಂ ಧಾರಯೇದ್ ಯಃ ಸಮಾಹಿತಃ ।
ಸ ವಿಧೂಯೇಹ ಶಮಲಂ ಬ್ರಹ್ಮಭೂಯಾಯ ಕಲ್ಪತೇ ॥ (11–5–53)

*****

# ಗ್ರಂಥಋಣ

| | | |
|---|---|---|
| 1) | ಶ್ರೀಮದ್ಭಾಗವತ (ಕನ್ನಡಾನುವಾದ) | ಶ್ರೀಪಂ॥ಪೂಜ್ಯ ಗುತ್ತಲ ರಂಗಾಚಾರ್ಯರು |
| 2) | ಶ್ರೀಮದ್ಭಾಗವತ (ಸಂಸ್ಕೃತವ್ಯಾಖ್ಯಾನ) | ಶ್ರೀಬಿದರಹಳ್ಳಿ ಶ್ರೀನಿವಾಸತೀರ್ಥರು |
| 3) | ಸಪ್ತಾಹಕ್ರಮದಲ್ಲಿ ಶ್ರೀಮದ್ಭಾಗವತ ಕಥಾಸಾರಸಂಗ್ರಹ | ಶ್ರೀನಿವಾಸ ಸು. ಮಠದ |
| 4) | ಭಗವದ್ಗೀತಾ ಕನ್ನಡಾನುವಾದ | ಡಾ॥ ಪ್ರಭಂಜನಾಚಾರ್ಯರು |
| 5) | ಶ್ರೀಮದ್ಭಾಗವತ ಮಹಾತ್ಮೆ | ಶ್ರೀಸ್ಕಂದಮಹಾಪುರಾಣ |

*****

| | | |
|---|---|---|
| 41) | ಶ್ರೀಮಂಗಲಾಷ್ಟಕಮಂಜರೀ | 15-00 |
| 42) | ಶ್ರೀ ದ್ವಾದಶಸ್ತೋತ್ರ-ಚಿಂತನ ಮಂಥನ | 20-00 |
| 43) | ಶ್ರೀಮದ್ ಭಾಗವತಸೂಕ್ತಿಸುಧಾನಿಧಿ (ಕನ್ನಡಾನುವಾದ ಸಹಿತ) | 20-00 |
| 44) | ಶ್ರೀಕರಾವಲಂಬನಸ್ತೋತ್ರಮಂಜರೀ (17 ಸ್ತೋತ್ರಗಳು ಮೂಲ ಮಾತ್ರ) | 20-00 |
| 45) | ಶ್ರೀಸುಮಧ್ವವಿಜಯ ಮಹಾಕಾವ್ಯ ಚಿಂತನ ಮಂಥನ | 25-00 |
| 46) | ಸ್ಮರಿಸು ಸಂತತ ಹರಿಯ (ಶ್ರೀ ಜಗನ್ನಾಥದಾಸರ ಒಂದು ಪದ್ಯದ ವಿವರಣೆ) | 15-00 |
| 47) | ಶ್ರೀವೈಕುಂಠವರ್ಣನೆ ಸಾರಸಂಗ್ರಹ | 20-00 |
| 48) | ಋಗ್ವೇದೀಯ ಶ್ರಾದ್ಧವಿಧಾನ (ಪಿಂಡಪ್ರದಾನ,ಸಂಕಲ್ಪ ಶ್ರಾದ್ಧಗಳ ವಿವರಣೆ ಸಹಿತ) | 25-00 |
| 49) | ಶ್ರೀ ಸತ್ಯಧರ್ಮತೀರ್ಥರು (ಚರಿತ್ರೆ,ಸ್ತೋತ್ರಗಳು) | 20-00 |
| 50) | ಗೋಪೀಚಂದನ, ಊರ್ಧ್ವಪುಂಡ್ರ,ಮುದ್ರಾಧಾರಣೆಗಳ ಅವಶ್ಯಕತೆ | 30-00 |
| 51) | ಧಾರ್ಮಿಕ ಆಚರಣೆಗಳ ಹಿನ್ನೆಲೆ (ಪ್ರಮಾಣ ಸಹಿತ) | 10-00 |
| 52) | ಶ್ರೀ ವೆಂಕಟೇಶಮಹಾತ್ಮೆ ಸಾರಸಂಗ್ರಹ (ನವರಾತ್ರಿ ಸಂಕಲ್ಪ ಸಹಿತ) | 15-00 |
| 53) | ಶ್ರೀ ಕಾಠಕೋಪನಿಷತ್ (ಒಂದು ಅಧ್ಯಯನ) | 30-00 |
| 54) | ಇತಿಹಾಸ ಪುರಾಣಗಳಲ್ಲಿ ಸ್ತ್ರೀಧರ್ಮಗಳು (ಸ್ತ್ರೀಜಪಕ್ರಮ ಸಹಿತ) | 15-00 |
| 55) | ದಾಸಸಾಹಿತ್ಯದ ಹಿನ್ನೆಲೆ(ವಿಶ್ವಮಧ್ವಮಹಾಪರಿಷತ್,ಬೆಂಗಳೂರು ಪ್ರಕಟಿತ) | 30-00 |
| 56) | ಜೀವನಯಜ್ಞ (ಆಯುರ್ಯಜ್ಞ) | 10-00 |
| 57) | ಭಗವತತ್ತ್ವ ಚಿಂತನೆ | 40-00 |
| 58) | ಶ್ರೀಹಯವದನವಿಠ್ಠಲಾಂಕಿತರ ಕೃತಿಗಳು | 15-00 |
| 59) | ಈಶಾವಾಸ್ಯೋಪನಿಷತ್ ಒಂದು ಅಧ್ಯಯನ | 20-00 |
| 60) | ದೇಹರಥ-ದೇವರಥ (60ವರ್ಷದ ಶಾಂತಿ ವಿವರಣೆ ಸಹಿತ) | 20-00 |
| 61) | ಶ್ರೀಪ್ರಹ್ಲಾದರಾಜರ ಉಪದೇಶ ಸಾರಸಂಗ್ರಹ | 15-00 |
| 62) | ಸತ್ಸಂಗ (ಸಾಧು ಸಜ್ಜನರ ಸಂಗ) | 15-00 |
| 63) | ಶ್ರೀವೇದವ್ಯಾಸ ಕರಾವಲಂಬನ ಸ್ತೋತ್ರಮ್(ಕನ್ನಡಾನುವಾದ) | 15-00 |
| 64) | ದೇವಪೂಜಾ ಸಾಮಗ್ರಿಗಳು-ಪರಿಚಯ | 20-00 |
| 65) | ಶ್ರೀಸರ್ವಮೂಲ ಸೌರಭ (ಸರ್ವಮೂಲಗ್ರಂಥಗಳ ಸಂಕ್ಷಿಪ್ತಪರಿಚಯ, ಸರ್ವಮೂಲ ಆದ್ಯಂತಶ್ಲೋಕಗಳ ಕನ್ನಡಾನುವಾದಸಹಿತ) | 20-00 |
| 66) | ಕಪಿಲಗೀತಾ ಸಾರಸಂಗ್ರಹ | 20-00 |
| 67) | ಮಂತ್ರಪುಷ್ಪ ಅಷ್ಟಾವಧಾನ ಸಹಿತ | 15-00 |
| 68) | ಸದಾಚಾರಸ್ಮೃತಿ - ಒಂದು ಅಧ್ಯಯನ | 20-00 |
| 69) | ಶ್ರೀಮಜ್ಜಯತೀರ್ಥಸ್ತುತಿಃ ಹಾಗೂ ಶ್ರೀಮಜ್ಜಯತೀರ್ಥ ವಿಜಯಃ | 10-00 |
| 70) | ಅಧಿಕಮಾಸದ ಆಚರಣೆ (33 ಹಾಡುಗಳ ಸಹಿತ) | 15-00 |
| 71) | ಇತಿಹಾಸ ಪುರಾಣಾದಿಗಳಲ್ಲಿ ಪುರುಷ ಸೂಕ್ತಾರ್ಥ ವಿವರಣೆ | 25-00 |
| 72) | ಶ್ರೀಹಯವದನ ವಿಠ್ಠಲಾಂಕಿತರ ಕೃತಿಗಳು ಭಾಗ-2 | 20-00 |
| 73) | ರಾತ್ರೀಸೂಕ್ತ | 10-00 |
| 74) | ಸ್ತವರಾಜ ಸ್ತೋತ್ರಮಂಜರೀ | 20-00 |
| 75) | ಪ್ರಣವ ಪ್ರತಿಪಾದ್ಯ ಪ್ರಹ್ಲಾದ ವರದ (ಶ್ರೀ ಜಗನ್ನಾಥದಾಸರ ಒಂದು ಪದ್ಯದ ವಿವರಣೆ) | 15-00 |
| 76) | ದಾಸಸಾಹಿತ್ಯ ಕುಸುಮಾಂಜಲಿ | 30-00 |
| 77) | ಜೀವತತ್ವಚಿಂತನೆ | 50-00 |
| 78) | ಶ್ರೀ ವಿಜಯಧ್ವಜತೀರ್ಥರು (ಜೀವನ,ಕೃತಿಗಳಪರಿಚಯ) | 15-00 |
| 79) | ತಿಥಿತ್ರಯ ಆಚರಣೆ | 20-00 |
| 80) | ಶ್ರೀಮದ್ ಭಾಗವತಾಂತರ್ಗತ ಜಾಯಂತೇಯೋಪಾಖ್ಯಾನ ಸಾರಸಂಗ್ರಹ (ವಿವರಣೆ ಸಹಿತ) | 20-00 |

